# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಸಾಮಾನ್ಯ ಜನರಿಂದ ಹಿಡಿದು ರಾಜ್ಯವನ್ನು ಪಾಲಿಸುವ ರಾಜನ ವರೆಗೂ ಏನೇನೋ ಸಮಸ್ಯೆಗಳು ಬಂದೇ ಬರುತ್ತವೆ. ಆಗ ಒಡೆಯನಾದವನೇ ಆದರ ಹೊಣೆಯನ್ನು ಹೊರಬೇಕಾಗುತ್ತದೆ. ಮನೆಯ ಒಡೆಯನೇ ಆಗಲಿ, ರಾಜ್ಯದ ಒಡೆಯನೇ ಆಗಲಿ ಒಳ್ಳೆಯ ಆಲೋಚನೆ ಎಂದುಕೊಂಡು ಮೇರೆ ಮೀರಿದ ಕೆಲಸಕ್ಕೆ ತಲೆ ಹಾಕಿದರೆ ನಾಲ್ಕು ಜನ ನಗುವಂತಾಗುತ್ತದೆ. ಹುಚ್ಚುತನವೆನಿಸುತ್ತದೆ. ಒಳಿತೆಂದು ಅಮಲುಪಡಿಸುವ ಲೋಕಧರ್ಮ ಮೀರುವಂತಹ ಕಾರ್ಯಗಳೆಲ್ಲವೂ ನಗೀಡಾಗುವ ರೀತಿಯನ್ನು ಈ ಸಂಚಿಕೆ ಯಲ್ಲಿರುವ "ವಿಲಕ್ಷಣ ಸಾಮಂತ" ಸಣ್ಣಕಥೆಯಲ್ಲಿ ನೋಡಬಹುದು.

## ಅಮರವಾಣಿ

**ಅಲ್ಪೋಽಧಿಕಾರ ಲಾಭಾತ್ತು ಸ್ವಾಮಿನೋ ವ್ಯತಿರಿಚ್ಯತೇ**
**ವಾಲುಕೋಽಪ್ಯರ್ಕತಪ್ತಾಗ್ರಂ ವಿವಸ್ವತ್ತಾಪನಾದಿವ**

ಅಲ್ಪನಿಗೆ ಅಧಿಕಾರವಿತ್ತರೆ ತನ್ನ ಒಡೆಯನನ್ನು ಮೀರಿಸುವ ಅಧಿಕಾರದರ್ಪ ತೋರಿಸವನು. ಸೂರ್ಯನ ಬಿಸಿಗಿಂತ ಅದರಿಂದ ಸುಟ್ಟ ಮರಳಿನ ಬಿಸಿ ಹೆಚ್ಚಲ್ಲವೆ ?

ಸಂಪುಟ: ೭೦ ಜೂನ್ '೮೩ ಸಂಚಿಕೆ : ೬

ಬಿಡಿ ಪ್ರತಿ ರೂ. ೨-೦೦ :: ವಾರ್ಷಿಕ ಚಂದಾ ರೂ. ೨೪-೦೦








# ಜಿಪುಣ ಪಿಶಾಚಿ

ಒಂದು ಊರಿನಲ್ಲಿ ಪೀತಾಂಬರನೆಂಬ ವ್ಯಾಪಾರಸ್ಥನಿದ್ದನು. ಜಿಪುಣತನದಲ್ಲಿ ಅವನಿಗೆ ದೊಡ್ಡ ಹೆಸರು ಬಂದಿತ್ತು. ಕಾರಣವೇನೆಂದರೆ ಅವನ ಜಿಪುಣತನದ ಕಾರ್ಯಗಳು ವಿಚಿತ್ರವಾಗಿದ್ದವು. ಅಂತಲೇ ಊರವರು ತಮ್ಮ ತಮ್ಮೊಳಗೆ ಅವನ ಸಂಗತಿಯನ್ನು ಹೇಳಿಕೊಳ್ಳುವಾಗ ಜಿಪುಣಾಂಬರನೆಂದೇ ಹೇಳುತ್ತಿದ್ದರು. ಅವನ ಜಿಪುಣತನದ ಕೆಲವು ವಿಷಯಗಳನ್ನು ಕತೆಯಾಗಿ ಹೇಳಿಕೊಳ್ಳುವರು.

ಆತನ ಹೆಂಡತಿ ಮೀನಾಕ್ಷಿ ಸಂಸಾರಕ್ಕೆ ಬಂದ ಮೇಲೆ ಗಂಡನ ಜಿಪುಣತ್ವದಿಂದಾಗಿ ಅವಳ ನಾಲಗೆಯ ರುಚಿ ಸತ್ತಿತು. ಎರಡು ಹೊತ್ತೂ ಉಪ್ಪಿನಕಾಯಿ ರಸ ಕಲಿಸಿಕೊಂಡು ನೀರು ಮಜ್ಜಿಗೆಯ ಊಟ ಮಾಡಿ ಮಾಡಿ ಬೇಸತ್ತು ಹೋದಳು. ಅಂತಹ ಊಟವನ್ನೇ ಮಾಡಿ ಗಂಡನು ತೇಗುವುದನ್ನು ನೋಡಿ ಅವಳು ಆಶ್ಚರ್ಯಪಡುತ್ತಿದ್ದಳು. ತಾನೂ ತನ್ನ ನಾಲಗೆಯನ್ನು ಸರಿಪಡಿಸಿಕೊಳ್ಳಬೇಕೆಂದು ಬಹಳ ಪ್ರಯತ್ನಪಟ್ಟಳು. ಕುರುಡ ಗಂಡನಂತೆ ಕಣ್ಣಿಗೆ ಬಟ್ಟೆ ಕಟ್ಟಿಕೊಂಡ ಗಾಂಧಾರಿಯನ್ನು ನೆನೆದು, ಸಹಿಸಿಕೊಳ್ಳುತ್ತಿದ್ದಳು. ಸಹನೆಗೂ ಒಂದು ಎಲ್ಲೆಯಿದೆಯಷ್ಟೆ?

ಒಂದು ದಿನ ಪೀತಾಂಬರನು ತನ್ನ ಅಂಗಡಿಗೆ ಬೇಕಾದ ಸರಕುಗಳನ್ನು ತರಲು ಪಟ್ಟಣಕ್ಕೆ ಹೋದನು. ಹಾಗೆ ಅವನು ಆಗಾಗ ಹೋಗುವುದಿತ್ತು. ಈ ಸಾರಿ ಅವನು ಹೋಗುವಾಗ "ನಾಳೆ ತಾನೆ ಹಿಂದಿರುಗುತ್ತೇನೆ. ಅದವರೆಗೆ ಮನೆ ಜಾಗ್ರತೆಯಾಗಿ ನೋಡಿಕೋ. ನಿನ್ನ ಖರ್ಚಿಗೆ ನಾನು ಕೊಟ್ಟಿದ್ದರಲ್ಲಿ ಉಳಿಸಿದಿಯಾದರೇ ನೀನು ತುಂಬ ಗಟ್ಟಿಗಿತ್ತಿ" ಎಂದು ಹೇಳಿ ಹೋಗಿದ್ದನು. ಹಾಗೆ ಮರುದಿನ ಬೆಳಿಗ್ಗೆ ಅವನು ಹಿಂದಿರುಗಿ ಬಂದಾಗ ಬಾಗಿಲು ತೆರೆದ ಮೀನಾಕ್ಷಿಯ ಮೂಗು ಫಳಫಳನೆ ಹೊಳೆಯುವುದನ್ನು ನೋಡಿ ಪೀತಾಂಬರನು ಬೆರಗಾದನು.

ಮರುಕ್ಷಣದಲ್ಲಿ ಬಹಳ ಕೋಪದಿಂದ, "ಯಾವಾಗ ಮಾಡಿಸಿಕೊಂಡೆ ಈ ಮೂಗುತಿ? ಕೋತಿ ಮೋರೆಯ ನಿನ್ನ ಮೂತಿಗೆ ಮೂಗುತಿಯೊಂದು ಕೇಡೇ ? ಮನೆ ಗುಂಡಾಂತರ ಮಾಡುವ ಕೆಲಸಕ್ಕೆ ಶುರು ಮಾಡಿದಿಯಾ! ನಾನು ಹೇಳಿದ್ದೇನು? ನೀನು ಮಾಡಿದ್ದೇನು? ಇದಕ್ಕೆ ನಿನಗೆ ಹಣ ಎಲ್ಲಿತ್ತು ?" ಎಂದನು.

"ಶ್ಶೂ ! ಮೆಲ್ಲ ಮಾತಾಡೀಂದ್ರೆ, ಒಳಗೆ ಬನ್ನಿ. ಇದು ಹೇಗೆ ಬಂತು ಅಂತ ಎಲ್ಲಾ ಹೇಳ್ತೇನೆ. ನಿಮ್ಮ

ಎಂ. ಕೆ. ಈಶ್ವರರಾವ್



ಮಾತು ಮೀರಿದ್ದೇನಾದ್ರೆ ಮತ್ತೆ ಕೇಳ್ರೀ" ಎಂದಳು ಮೀನಾಕ್ಷಿ ಪಿಸುದನಿಯಿಂದ.

ಪೀತಾಂಬರನು ಗೊಣಗುತ್ತಾ ಒಳಗೆ ಹೋದನು. ಆಗ ಮೀನಾಕ್ಷಿ ಹೇಳಿದ ಸಂಗತಿ ಏನೆಂದರೆ, ಗರ್ಭಿಣಿಯಾಗಿದ್ದ ಅವಳಿಗೆ ಹೆಸರುಂಡೇ ತಿನ್ನುವ ಆಸೆಯಾಯಿತಂತೆ. ಅದನ್ನು ತೀರಿಸದಿದ್ದರೆ ಹುಟ್ಟುವ ಮಗುವಿಗೆ ಏನಾದರೂ ಅಂಗಲೋಪವಾಗುತ್ತದೆಂದು ಹೇಳುತ್ತಾರಷ್ಟೇ ? ಆ ಕಾರಣದಿಂದ ಅವಳು ಗಂಡನಿಗೆ ತನ್ನ ಆಸೆಯನ್ನು ತಿಳಿಸಲು ನಾಚಿ, ಆತನು ಇಲ್ಲದ ದಿನ ನೋಡಿ ತನ್ನ ಹತ್ತಿರ ಇದ್ದ ಸ್ವಲ್ಪ ಹಣದಿಂದ ತನಗೆ ಎಷ್ಟು ಬೇಕೋ ಅಷ್ಟೇ ಹೆಸರು ಬೇಳೆಬೆಲ್ಲ ತುಪ್ಪಗಳನ್ನು ತಂದಳು.

ಇದು ನೆರೆಕೆರೆಯವರಿಗೆ ಕೂಡಾ ತಿಳಿಯಬಾರದೆಂದು ಕೊಂಡು, ರಾತ್ರಿ ಊರೆಲ್ಲ ಮಲಗಿದ ಮೇಲೆ ಹೆಸರು ಬೇಳೆ ಹುರಿದು ಬೀಸಿ, ಬೆಲ್ಲದ ಪಾಕ, ತುಪ್ಪ ಬೆರೆಸಿ ಉಂಡೆ ಹಿಡಿಯ ತೊಡಗಿದಳು. ಎಷ್ಟು ಜಾಗ್ರತೆ ವಹಿಸಿದರೂ ಪರಿಮಳ ಬಾರದೆ ಇರುತ್ತದೆಯೆ ?

ಆಗ "ಭಲೇ ಭಲೇ ! ನೀನು ಈ ಮನೆಗೆ ಬಂದ ಐದು ವರ್ಷಗಳಿಂದ ನೋಡುತ್ತಿದ್ದೇನೆ. ಉಪ್ಪಿನ ಕಾಯಿ ವಾಸನೆ ಹೊರತು ಮತ್ತೇನೂ ಬರಲಿಲ್ಲ ಈ ಮನೆಯಲ್ಲಿ. ಹೆಸರುಂಡೆ ಅಂದರೆ ನನಗೆ ತುಂಬಾ ಪ್ರಾಣ ಕಣೇ ! ಪರಿಮಳಕ್ಕೆ ನಾಲಿಗೆ ನೀರಿಳಿಸ್ತಾ ಇದೆ. ಎರಡು ಉಂಡೆ ಮಾತ್ರ ನನಗೂ ಕೊಡೇ, ನೀನೊಬ್ಬಳೇ ತಿನ್ನ ಬಾರದು ಕಣೇ!" ಎನ್ನುತ್ತ ಹೆಣ್ಣು ಪಿಶಾಚಿಯೊಂದು ಕೋಣೆಯಲ್ಲಿ ಪ್ರತ್ಯಕ್ಷವಾಯಿತು.

ಮೀನಾಕ್ಷಿ ಹೆದರಿ ಕಣ್ಣು ಬಿಟ್ಟಳು.

"ಹೆದರಬೇಡ ಮೀನಾಕ್ಷಿ. ನಾನೇನೂ ಹೊರಗಿನ ದೆವ್ವ ಅಲ್ಲ. ನಿಮ್ಮನೇ ಹಿಂದಿನ ಹುಣಿಸೇ ಮರದಲ್ಲೇ ಇರುವವಳು. ನಿಮ್ಮನೆಯ ಎಲ್ಲಾ ಪೀಡೆಗಳನ್ನೂ ತೊಲಗಿಸುವವಳಮ್ಮಾ ನಾನು. ನಿನ್ನನ್ನು ಕಣ್ಣಿಗೆ ಎಣ್ಣೆ ಹಾಕಿ ನೋಡಿಕೊಳ್ಳುತ್ತೇನೆ" ಎಂದು ಸೌಮ್ಯವಾಗಿ ಹೇಳಿತು ಪಿಶಾಚಿ. ಇದನ್ನು ಕೇಳಿ ಧೈರ್ಯಗೊಂಡ ಮೀನಾಕ್ಷಿ, ನಾಲ್ಕು ಹೆಸರುಂಡೆಗಳನ್ನು ಹರಿವಾಣದಲ್ಲಿಟ್ಟು ಆ ಪಿಶಾಚಿಯ ಮುಂದೆ ಇಟ್ಟಳು.

ಪಿಶಾಚಿ ಆನಂದದಿಂದ ರಾಗ ತೆಗೆಯುತ್ತ ಆ ಉಂಡೆಗಳನ್ನು ತಿಂದು, "ಆಗಾಗ ಹೀಗೆ ಏನಾದರೂ ಭಕ್ಷ್ಯ ಮಾಡು. ನಿನ್ನ ಗಂಡನ ಮುಂದೆ ಬರಲು ನನಗೆ ನಾಚಿಕೆಯಾಗುತ್ತೆ. ಆತ ಇಲ್ಲದಿರುವಾಗಲೇ ಮಾಡಿ ಬಿಸಿ ಬಿಸೀ ನನಗೂ ಎರಡು ಕೊಡುತ್ತಾ ಇರು. ಏನಪ್ಪಾ, ಇವಳೊಬ್ಬಳು ಸುಮ್ಮನೇ ಬಂದು ತಿಂದು ಹೋಗ್ತಾಳೇ ಅಂತ ತಿಳೀಬೇಡ" ಎಂದು ಹೇಳಿ ಪಿಶಾಚಿ ಮಾಯವಾಗಿ ಹೋಯಿತು.

ಅದು ಹೋದ ಮೇಲೆ ನೋಡಿದಾಗ, ಅದಕ್ಕೆ ಕೊಟ್ಟ ಹೆಸರುಂಡೆಯ ಹರಿವಾಣದಲ್ಲಿ ಮೂಗುತಿಯೊಂದು ಹೊಳೆಯುತ್ತಾ ಇತ್ತು ! ತನ್ನ ಮೂಗಿಗೆ ಹೇಳಿ ಮಾಡಿಸಿದ ಹಾಗಿದೆ.



ಮೀನಾಕ್ಷಿ ಗಂಡನೊಂದಿಗೆ ಈ ಸಂಗತಿಯನ್ನೆಲ್ಲಾ ಹೇಳಿ " ನೋಡಿದಿರಾ! ಚೆಂದಾಗಿಲ್ಲ್ವಾ ನನ್ನ ಮೂಗು ? ನಾವು ಮಾಡಿದ ಖರ್ಚಿಗಿಂತ ನೂರು ಪಾಲು ಲಾಭ ಬಂತು !" ಎಂದಳು

ಅದನ್ನು ಕೇಳಿ ಪೀತಾಂಬರನಿಗೆ ಕೋಪವಿಳಿದು ಕಣ್ಣುಗಳು ಸಂತೋಷದಲ್ಲಿ ಹೊಳೆದುವು. ಮತ್ತೆ ಇಷ್ಟು ಕಾಲ ಒಳ್ಳೆಯ ಭಕ್ಷ್ಯ ಮಾಡದೇ ಬಿಟ್ಟುದಕ್ಕೆ ಹೆಂಡತಿಯನ್ನು ಸ್ವಲ್ಪ ಜರೆದು, "ಇನ್ನು ಮೇಲಾದರೂ ಆಗಾಗ ಏನಾದರೂ ಭಕ್ಷ್ಯ ಮಾಡಿ ಪಿಶಾಚೀನ ಕರೆದು ಕೊಡುತ್ತಾ ಇರು. ನನಗೇನೂ ಬೇಕಂತಿಲ್ಲ. ತಿಂದರೆ ಹೊಟ್ಟೆಗೂ ಆಗದು. ನಿನಗೂ ಪಿಶಾಚಿಗೂ ಮಾತ್ರವೇ ಮಾಡು, ಸಾಕು. ನೆನಪಿಟ್ಟುಕೋ. ಪಿಶಾಚಿ ಹೆಚ್ಚು ಬೇಕು ಅಂತ ಕೇಳಿದರೆ, ಹೆಚ್ಚು ಮಾಡಲು ಶಕ್ತಿ ಇಲ್ಲಾ ಅಂತ ಹೇಳಿಬಿಡು. ದಾಕ್ಷಿಣ್ಯ ಮಾಡಬೇಡ" ಎಂದು ಎಚ್ಚರಿಕೆ ಕೊಡುತ್ತಾ ಹೇಳಿದನು. ಆ ದಿನದಿಂದ ಪೀತಾಂಬರನು ಅಗತ್ಯವಿಲ್ಲದಿದ್ದರೂ ತಾನಿಲ್ಲದಾಗ ಮಾತ್ರ ಬರುವ ಆ ನಾಚಿಕೆಯ ಪಿಶಾಚಿಗಾಗಿ, ರಾತ್ರಿ ಎಲ್ಲಿಗಾದರೂ ಹೋಗಿ ಬೆಳಿಗ್ಗೆ ಬರುತ್ತಿದ್ದನು. ಕ್ರಮವಾಗಿ ಮೀನಾಕ್ಷಿಯ ಕೈಗಳಿಗೂ, ಕಿವಿಗಳಿಗೂ, ಬೆರಳುಗಳಿಗೂ, ಕೊರಳಿಗೂ ನಗಗಳು ಕೊಡುತ್ತಾ ಬಂದುವು. ಪರವಾಗಿಲ್ಲ. ಪಿಶಾಚಿಯ ಸ್ನೇಹದಿಂದ ಮನೆಗೆ ಸಿರಿಕೂಡುತ್ತಾ ಬರುವುದನ್ನು ನೋಡಿ ಪೀತಾಂಬರನಿಗೆ ಸಂತೋಷವಾಯಿತು.

ಆದರೆ ಇಷ್ಟರಿಂದ ಪೀತಾಂಬರನಿಗೆ ತೃಪ್ತಿಯಾಗಲಿಲ್ಲ. ಅವನು ಪಿಶಾಚಿಯಿಂದ ದೊಡ್ಡ ಮೊತ್ತವಾಗಿ ಧನವನ್ನು ಸಂಪಾದಿಸಿ ಬಿಡಬೇಕೆಂದು ಎಣಿಸುತ್ತಿದ್ದನು. ಈ ಆಶೆಯಿಂದ ಅವನು ದಿನಾ ಕತ್ತಲೆಯಾಗುವ ಹೊತ್ತಿನಲ್ಲಿ ಮನೆ ಹಿಂದಿನ ಹುಣಿಸೇ ಮರದ ಕೆಳಗೆ ನಿಂತು, " ಓ ದಯಾಮಯಿಯಾದ ಪಿಶಾಚಮ್ಮಾ ! ನನ್ನ ಹೆಂಡತಿಯನ್ನು ಮಗಳ ಹಾಗೆ ನೋಡುವೆಯಲ್ಲಾ ! ಒಂದು ಸಾರಿ ನನ್ನ ಕಣ್ಣಿಗೂ ಕಾಣಲಾರೆಯಾ ? ಗಂಡುಸರೆಂದರೆ ಅಷ್ಟು ಸಂಕೋಚದ ಪಿಶಾಚಿಯನ್ನು ನಾನು ಕೇಳಲೇ ಇಲ್ಲ. ನೀನು ದೇವತೆಗೆ ಸಮಾನಳು. ನನಗೂ ದರ್ಶನ ಕೊಡು!" ಎಂದು ಕೈ ಜೋಡಿಸಿ ನಮಸ್ಕಾರ ಮಾಡುತ್ತಿದ್ದನು.

ಹಾಗೆ ಮಾಡುವುದರಿಂದ ಪಿಶಾಚಿ ಅವನ ಕಣ್ಣಿಗೆ ಬೀಳಲೇ ಇಲ್ಲ. ಹೇಗಾದರೂ ಆ ಪಿಶಾಚಿಯನ್ನು ನೋಡಿ, ಅದರ ಮನಸ್ಸು ಕರಗಿಸಿ ದೊಡ್ಡ ಮೊತ್ತವನ್ನು ಸಂಪಾದಿಸಲೇಬೇಕೆಂದು, ಒಂದು ದಿನ ಸಾಯಂಕಾಲ ಪೀತಾಂಬರನು ಹೆಂಡತಿಯೊಂದಿಗೆ ಈ ದಿನ ನಾನು ಪಟ್ಟಣಕ್ಕೆ ಹೋಗುವೆನೆಂದು ಸುಳ್ಳು ಹೇಳಿದನು.

" ಹಾಗೆಯೇ ಹೋಗಿ ಬನ್ನಿ, ಆ ಪಿಶಾಚಮ್ಮನಿಗೆ ಬೇಳೆಮಣಿಯ ತೆಂಗಿನ ಹಾಲು ಪಾಯಸವೆಂದರೆ ತುಂಬಾ ಇಷ್ಟವಂತೆ. ಮೊನ್ನೆಯಿಂದ ಹೇಳುತ್ತಾ ಇದೆ. ಅದಕ್ಕಾಗಿಯೇ ಹಾಲು ಬರುವ ತೆಂಗಿನಕಾಯಿ

ತಂದಿಟ್ಟಿದ್ದೇನೆ. ಇವತ್ತು ರಾತ್ರಿ ಅದನ್ನೇ ಮಾಡಿ ಬಿಡುತ್ತೇನೆ" ಎಂದಳು ಮೀನಾಕ್ಷಿ.

ಹೆಂಡತಿ ಅಡಿಗೇ ಮನೆಗೆ ಹೋದ ಕೂಡಲೇ ಪೀತಾಂಬರನು ಅಟ್ಟದ ಮೇಲೆ ಹತ್ತಿ ಅಡಗಿ ಕುಳಿತನು. ಸ್ವಲ್ಪ ಹೊತ್ತಿಗೆ ಮೀನಾಕ್ಷಿ ತೆಂಗಿನಕಾಯಿ ಹೆರೆದು ಕಡೆಯುವ ಕೆಲಸ ಪ್ರಾರಂಭಿಸಿದಳು. ಯಾಲಕ್ಕಿಯ ಪರಿಮಳದೊಂದಿಗೆ ಅಟ್ಟದಲ್ಲೆಲ್ಲಾ ಘಮಘಮಿಸುವ ತೆಂಗಿನ ಹಾಲು ಪಾಯಸ ತಯಾರಾಯಿತು. ಆಗ ರಾತ್ರಿ ಬಹಳ ಹೊತ್ತೂ ಆಗಿತ್ತು.

ಮೀನಾಕ್ಷಿ ಪಾಯಸದ ಪಾತ್ರೆಯನ್ನು ನಡು ಗೋಣೆಯಲ್ಲಿಟ್ಟುಕೊಂಡು, ರುಚಿ ಚಪ್ಪರಿಸುತ್ತ ಕುಡಿಯಲೂ ಸುರಿದು ತಿನ್ನಲೂ ತೊಡಗಿದಳು. ಅಟ್ಟದಲ್ಲಿರುವ ಪೀತಾಂಬರನು ಪಿಶಾಚಿ ಈಗ ಬರುತ್ತೆಂದು ಕಣ್ಣು ಬಿಟ್ಟು ನೋಡುತ್ತಾ ಇದ್ದನು. ಪಿಶಾಚಿಗಾಗಿ ಪಾಯಸ ಉಳಿಸುತ್ತಾಳೋ ಎಂದು ನೋಡುವಾಗ ಪೂರಾ ಮೀನಾಕ್ಷಿಯೇ ತಿಂದು ಪಾತ್ರೆ ಒರೆಸಿ ನಕ್ಕಿದುದೂ ಆಯಿತು.

ಅದನ್ನು ನೋಡಿ ಪೀತಾಂಬರನು ಆವೇಶದಿಂದ ಬಡಬಡನೆ ಕೆಳಗೆ ಹಾರಿ ಬಂದು, "ಅಷ್ಟು ಬೆಲೆ ಬಾಳುವ ಪಾಯಸ ಪೂರಾ ತಿಂದು ತೀರಿಸಿದೆಯಲ್ಲಾ! ಹೊಟ್ಟೆ ತುಂಬಿಸಿಕೊಳ್ಳಲು ಉಪ್ಪಿನಕಾಯನ್ನ ಸಾಲದೇನೇ? ಈಗ ಪಿಶಾಚಿ ಬಂದರೆ ಏನು ಕೊಡುತ್ತೀ?" ಎಂದು ಜೋರು ಮಾಡಿದನು.

ಮೀನಾಕ್ಷಿ ಹೆದರಿ ಗಾಬರಿಯಾಗಿ, ಕಣ್ಣೀರು ತುಂಬಲು, "ನನ್ನನ್ನು ಕ್ಷಮಿಸೀ. ಪಿಶಾಚಿ ದೆವ್ವ ಯಾವುದೂ ಇಲ್ಲ. ದಿನಾ ಉಪ್ಪಿನ ಕಾಯಿ ತಿಂದು ಸಾಕಾಗಿ, ಈ ಸುಳ್ಳು ಉಪಾಯ ಮಾಡಿದೆ, ನಮ್ಮನೇಲಿ ಹತ್ತುಮಂದಿ ಕೂತು ತಿಂದರೂ ಕರಗದಷ್ಟು ಆಸ್ತಿಯಿದೆಯಲ್ಲಾ ಅಂತ ಹೀಗೆ ಮಾಡಿದೆ." ಎಂದಳು ಬಿಕ್ಕುತ್ತ.

"ಹಾಗಾದರೆ ಈ ನಗಗಳೆಲ್ಲ ಎಲ್ಲಿಂದ?" ಎಂದು ಕೇಳಿದನು ಪೀತಾಂಬರ.

"ಇವೆಲ್ಲಾ ಗಿಲಿಟು ನಗಗಳೇ. ಈ ಉಪಾಯಕ್ಕಾಗಿ ನಾನೇ ಕೊಂಡು ಕೊಂಡು ತಂದೆ" ಎಂದಳು ಮೀನಾಕ್ಷಿ.



ಪೀತಾಂಬರನು ಕೋಪದಿಂದ ಹಲ್ಲು ಕಡಿದು ಕಣ್ಣು ತಿರುಗಿಸುತ್ತ, ಮೂಲೆಯಲ್ಲಿದ್ದ ದೊಣ್ಣೆಯನ್ನು ಕೈಗೆ ಎತ್ತಿಕೊಂಡನು. ಅಷ್ಟರಲ್ಲಿ "ನಿಲ್ಲು, ನಿಲ್ಲಿಸು! ಮೈಮರೆತ ಕೋಪ ನಿನ್ನ ಮೈಯನ್ನೇ ಮುರಿದು ಹಾಕೀತು!" ಎನ್ನುತ್ತ ಒಂದು ಹೆಣ್ಣು ಪಿಶಾಚಿ ಅವನ ಮುಂದೆ ನಿಂತಿತು.

ಅದನ್ನು ನೋಡಿ ಪೀತಾಂಬರನೂ, ಮೀನಾಕ್ಷಿಯೂ ಹೆದರಿ ನಡುಗಿದರು. ಪಿಶಾಚಿ ಹೆದರಬೇಡಿರೆಂದು ಅವರಿಗೆ ಹೇಳಿ, ಪೀತಾಂಬರನನ್ನು ನೋಡಿ, "ಅಲ್ಲಯ್ಯಾ, ಪಿಟ್ಟಾಸೇ ಜಿಪುಣಾಂಬರಾ! ನಿನ್ನ ಹೆಂಡತಿಯ ಸುಳ್ಳಿನಲ್ಲಿ ಸ್ವಲ್ಪ ನಿಜವೂ ಇದೆ. ನಾನು ನಿನ್ನ ಮನೆ ಹಿಂದಿನ ಹುಣಿಸೇ ಮರದಲ್ಲೇ ಇರುವವಳು!" ಎಂದಿತು.

ಈಗ ಪೀತಾಂಬರನು ಧೈರ್ಯ ತಂದುಕೊಂಡು "ಬಾಡಿಗೆಯ ಉಪದ್ರ ಇಲ್ಲವೆಂದು ಅದರಲ್ಲಿರುವೆಯಾ? ನಮ್ಮ ಗಂಡ ಹೆಂಡಿರ ಜಗಳದ ಮಧ್ಯೆ ನಿನಗೇನು ಕೆಲಸ? ಹೋಗಿಬಿಡು ಇಲ್ಲಿಂದ!" ಎಂದನು.

"ಹೋಗುತ್ತೇನೆ, ತಡೆ. ಹೋಗುವ ಮೊದಲು ಮೀನಾಕ್ಷಿಯ ಮೇಲೆ ನನಗಿರುವ ಅಭಿಮಾನದಿಂದ ನಿನಗೆ ಎರಡು ಮಾತು ಹೇಳಿಬಿಡುತ್ತೇನೆ. ನಾನು ನಿನಗಿಂತ ಹೆಚ್ಚು ಜಿಪುಣೆಯಾಗಿದ್ದವಳು ನನ್ನ ಗಂಡ ಸಂಪಾದಿಸಿದ್ದನ್ನೆಲ್ಲಾ ಅಡಗಿಸಿಟ್ಟು, ಮನೆಯಲ್ಲಿದ್ದವರಿಗೆ ಉಪ್ಪನ್ನ ತಿನ್ನಿಸಿಕೊಂಡಿದ್ದೆ. ನನ್ನ ಹಣವನ್ನೆಲ್ಲಾ ಕಳ್ಳರು ಕದ್ದೊಯ್ದರು. ಅದೇ ಚಿಂತೆಯಲ್ಲಿ ಸತ್ತು ಪಿಶಾಚಿಯಾದೆ. ನಾನು ಸತ್ತದ್ದಕ್ಕೆ ಅಳುವವರು ಕೂಡಾ ಯಾರೂ ಇಲ್ಲ. ಅದೇ ನನಗೆ ದೊಡ್ಡ ದುಃಖ. ಮನುಷ್ಯರಿಗೆ ಮಿತವ್ಯಯವಿರಬೇಕೇ ಹೊರತು ಇಂತಹ ಜಿಪುಣತನವಿರಕೂಡದು. ನೀನೂ ಸತ್ತು ನನ್ನ ಹಾಗೆ ಪಿಶಾಚಿಯಾಗುವಿಯಾ?" ಎಂದಿತು ಆ ಪಿಶಾಚಿ.

ಆ ಮಾತು ಕೇಳುತ್ತಿದ್ದಂತೆ ಪೀತಾಂಬರನಿಗೆ ತಾನು ಕೂಡಾ ಪಿಶಾಚಿಯಾದಂತೆ ತೋರಿತು. ಅವನು ಪಿಶಾಚಿಗೆ ಕೈಜೋಡಿಸಿ, "ನಿನ್ನ ಉಪಕಾರ ಜನ್ಮದಲ್ಲಿ ಮರೆಯಲಾರೆ. ಮುಂದೆ ನಾನೂ ಪಿಶಾಚಿಯಾಗಿ ಆ ಹುಣಿಸೇಮರದ ಮೇಲೆ ಸೇರದಂತೆ ನನ್ನನ್ನು ಕಾಪಾಡಿದಿ" ಎಂದನು.

"ಅಬ್ಬ! ಇಷ್ಟು ಕಾಲದ ಮೇಲೆ ನಾನೊಂದು ಒಳ್ಳೇ ಕೆಲಸ ಮಾಡಿದೆ!" ಎಂದು ಪಿಶಾಚಿ ಕಿಟಿಕಿಯ ಮೂಲಕ ಹೊರಗೆ ಹೋಗಿ ಮಾಯವಾಯಿತು. "ಮೀನಾಕ್ಷಿ, ಇಷ್ಟು ದಿನ ನಿನ್ನನ್ನು ತುಂಬಾ ಕಷ್ಟ ಪಡಿಸಿದೆ. ನಾನಿನ್ನು ಆ ಪೀತಾಂಬರನಲ್ಲ." ಎಂದನು ಪೀತಾಂಬರ.

ಮೀನಾಕ್ಷಿ ಗಂಡನ ಪಾದಗಳನ್ನು ಮುಟ್ಟಿ ಕಣ್ಣಿಗೆ ಒತ್ತಿಕೊಂಡಳು.






# ನಾಲ್ವರು ವರಂದಿರು

ಅದ್ಭುತ ಕಲ್ಪನೆಗಾರನಾದ ಬೇತಾಳನನ್ನು ಸೋಲಿಸದೆ ಬಿಡೆನೆಂಬ ದೃಢ ನಿರ್ಧಾರಗೊಂಡಿದ್ದ ರಾಜಾ ತ್ರಿವಿಕ್ರಮನು, ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಹೆಗಲಿನ ಮೇಲೇರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಆವಹಿಸಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜಾ, ಈ ನಡು ರಾತ್ರಿಯ ಹೊತ್ತಿನಲ್ಲಿ ನಿನ್ನನ್ನು ಇಂತಹ ಅಸಾಧಾರಣ ಕಾರ್ಯಕ್ಕೆ ನಿಯೋಜಿಸಿದವನು ಏನೋ ತಪ್ಪು ಲೆಕ್ಕ ಹಾಕಿಕೊಂಡಿರುವ ಹಾಗೆ ನನಗೆ ಸಂಶಯ ವಾಗುತ್ತಿದೆ. ಆದರಿಂದ ಸಿಗುವ ಪ್ರತಿಫಲದ ವಿಷಯ ದಲ್ಲಿಯೂ ನೀನು ತಪ್ಪುಲೆಕ್ಕ ಹಾಕಿಕೊಂಡಿರಬೇಕು. ಮನುಷ್ಯರು ತಮ್ಮ ಜೀವಿತವನ್ನು ಮಾತ್ರವಲ್ಲದೆ, ತಮ್ಮ ಆಪ್ತರ ಜೀವಿತವನ್ನು ಕೂಡಾ ಸುಖಕರ ವಾದ ಮಾರ್ಗದಲ್ಲಿ ನಡೆಯುವಂತೆ ಪ್ರಯತ್ನಿಸುವ ಸಂಗತಿ ನಿನಗೂ ತಿಳಿದಿರಬಹುದು. ಆದರೆ ಅದಕ್ಕೆ ಮಾಡುವ ಪ್ರಯತ್ನವು ಒಂದೊಂದು ಸಾರಿ ಅಪ ಜಯವಾಗುವುದೂ ಉಂಟು, ಒಂದೊಂದು ಸಾರಿ

ಬೇತಾಳಕಥೆಗಳು?....



ವಿಜಯವಾಗಿರಲೂ ಸಾಕು. ಈ ಬಗೆಯ ಜಯಾಪಜಯಗಳಿಗೆ ಮನುಷ್ಯನು ತನ್ನ ಎದುರಾಳಿಯನ್ನು ಕುರಿತು ಮಾಡಿಕೊಳ್ಳುವ ಲೆಕ್ಕದ ಮೇಲೆ ಆಧಾರಪಟ್ಟಿವೆ. ಇದಕ್ಕೆ ಉದಾಹರಣೆಯಾಗಿ, ನಿನಗೇನಾದರೂ ಒಳಿತಾಗಬೇಕೆಂಬ ಅಭಿಪ್ರಾಯದಿಂದ ಸುಂದರಯ್ಯನೆಂಬೊಬ್ಬ ಧನಿಕನ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕಥೆ ಕೇಳುತ್ತಾ ನಡೆ" ಎಂದು ಕಥೆಯನ್ನು ಪ್ರಾರಂಭಿಸಿತು :

ಸುಂದರಯ್ಯ ಬಹು ದೊಡ್ಡ ಧನವಂತನಾಗಿದ್ದನು. ಅವನಿಗೆ ಬಂಗಾರದ ಬೊಂಬೆಯಂತಹ ಒಬ್ಬಳೇ ಮಗಳಿದ್ದಳು. ಅತ್ಯಂತ ಸೌಂದರ್ಯವತಿ. ತನ್ನ ಮಗಳಿಗೆ ಯೋಗ್ಯನಾದ ವರನನ್ನು ಆರಿಸಿ, ಅಳಿಯನನ್ನಾಗಿ ಮಾಡಿಕೊಂಡು ತನ್ನ ಸರ್ವಾಸ್ತಿಯನ್ನೂ ಅವನಿಗೇ ಒಪ್ಪಿಸಬೇಕೆಂಬುದು ಅವನ ಆಶಯ. ರೂಪದಲ್ಲಿ ಗುಣಗಳಲ್ಲಿ, ಯೋಗ್ಯತೆಯಲ್ಲಿ ತನ್ನ ಆಲೋಚನೆಗೆ ತಕ್ಕ ಅಳಿಯನೇಸಿಗಬೇಕೆಂಬುದು ಅವನ ಉದ್ದೇಶ.

ಸುಂದರಯ್ಯನಿಗೆ ಚಿಕ್ಕಂದಿನ ಸ್ನೇಹಿತರು ನಾಲ್ವರಿದ್ದರು. ಆ ನಾಲ್ವರೂ ಬೇರೆ ಬೇರೆ ಊರುಗಳಲ್ಲಿ ಸ್ಥಿರ ನಿವಾಸ ಏರ್ಪಡಿಸಿಕೊಂಡಿದ್ದರು. ಅವರು ನಾಲ್ವರಿಗೂ ತನ್ನ ಮಗಳ ವಯಸ್ಸಿಗೆ ಸರಿಹೊಂದುವಂತಹ ಗಂಡು ಮಕ್ಕಳಿದ್ದಾರೆಂದೂ ಅವನಿಗೆ ಗೊತ್ತಾಗಿತ್ತು. ಅವರಲ್ಲಿ ಒಬ್ಬನನ್ನು ತನ್ನ ಮಗಳಿಗೆ ಆರಿಸಿ ಮದುವೆ ನೆರವೇರಿಸಬೇಕೆಂಬ ಉದ್ದೇಶದಲ್ಲಿ ಸುಂದರಯ್ಯ ಅವರಿರುವ ಊರುಗಳಿಗೆ ಹೊರಟನು. ಆ ನಾಲ್ವರ ಪರೀಕ್ಷೆಯಾದ ಮೇಲೆ ಬೇರೆ ಕಡೆಯಲ್ಲಿ ಪ್ರಯತ್ನಿಸಬಹುದೆಂದು ಎಣಿಸಿಕೊಂಡನು.

ಮೊದಲು ಅವನು ಐನಾಪುರದಲ್ಲಿರುವ ಚಂದ್ರಕಾಂತನೆಂಬ ಮಿತ್ರನ ಮನೆಗೆ ಹೋದನು. ಈಗ ಚಂದ್ರಕಾಂತನು ಸುಂದರಯ್ಯನನ್ನು ಮೀರಿಸುವಂತಹ ವೈಭವದಲ್ಲಿ ತೇಲಾಡಿಕೊಂಡಿರುವನೆಂದು ಪ್ರತ್ಯಕ್ಷವಾಯಿತು. ಅವನು ಸುಂದರಯ್ಯನನ್ನು ಬಹಳ ಅಭಿಮಾನದಿಂದ ಆದರಿಸಿದನು. ಚಿಕ್ಕಂದಿನಲ್ಲಿ ಅವರೊಳಗೆ ನಡೆದ ಕೆಲವು ಸ್ವಾರಸ್ಯ ಘಟನೆಗಳನ್ನು ಎತ್ತಿ ಹೇಳಿದನು. ಚಂದ್ರಕಾಂತನ ಮಗನಾದ ಪುಷ್ಪಕಾಂತನು ಸುಂದರ ಯುವಕನಾಗಿ, ಒಳ್ಳೆಯ ಸಭ್ಯ ಸಂಸ್ಕಾರವಂತನಾಗಿ ಕಾಣಿಸುತ್ತಿದ್ದನು. ಅವನ ವಿನಯ ಗುಣವು ಸುಂದರಯ್ಯನನ್ನು ತುಂಬಾ ಆಕರ್ಷಣೆ ಮಾಡಿತು. ವರನೂ, ವರನ ತಂದೆ ತಾಯಿಗಳೂ ಅವರ ಆಚಾರ ವಿಚಾರಗಳೂ ಚೆನ್ನಾಗಿಯೇ ಕಂಡು ಬಂದುವು.

ಮಾತಿನ ನಡುವೆ ಸುಂದರಯ್ಯನು ತನ್ನ ಮಗಳ ಮದುವೆಯ ಪ್ರಸಕ್ತಿಯನ್ನು ಎತ್ತಿದನು. ಅವಳ ಹೆಸರು ಕೇಳಿ ಚಂದ್ರಕಾಂತನು, "ನಿನ್ನ ಮಗಳ ಹೆಸರು ಚಂಪೆಯೆಂದು ಹೇಳಿದಿಯಲ್ಲವೆ? ನನ್ನ ಮಗನಿಗೆ ಪ್ರಿಯವಾದ ಕುದುರೆಯ ಹೆಸರು ಕೂಡಾ ಅದೇ! ಆ ಕುದುರೆ ನೋಡಿದರೆ ಭೂಲೋಕದ ಕುದುರೆಯಂತೆ ಕಾಣದು, ದೇವಲೋಕದ ಉಚ್ಚೈ

ಶ್ರವದ ಹಾಗೇ ಇರುತ್ತೆ. ಅಂದ ಹಾಗೆ ನಿನಗೆ ನನ್ನ ಅಶ್ವಶಾಲೆ ತೋರಿಸಲಿಲ್ಲ. ಬಾರಯ್ಯ" ಎಂದು ಸುಂದರಯ್ಯನನ್ನು ತನ್ನ ಅಶ್ವ ಶಾಲೆಗೆ ಕರೆದು ಕೊಂಡು ಹೋದನು. ನಿಜಕ್ಕೂ ನೋಡ ತಕ್ಕಂತಹ ಅಶ್ವಶಾಲೆಯಾಗಿತ್ತು. ಅಷ್ಟು ಭವ್ಯ, ಅಷ್ಟು ಶುಭ್ರ !

ಅಲ್ಲಿರುವ ಕುದುರೆಗಳನ್ನು ನೋಡಿ ಸುಂದರಯ್ಯನಿಗೆ ಬಾಯಿಯಿಂದ ಮಾತೇ ಹೊರಡಲಿಲ್ಲ. ತನ್ನ ಆಸ್ತಿ ಸರ್ವಸ್ವವನ್ನು ಕೊಡಿಸಿದರೂ ಆ ಕುದುರೆಗಳ ಬೆಲೆಗೆ ಸರಿಹೋಗಲಾರದು ! ಯಾವ್ಯಾವ ದೇಶಗಳಿಂದಲೋ ತರಿಸಿದ ಶ್ರೇಷ್ಠ ಕುದುರೆಗಳು ಅವೆಲ್ಲಾ,

ಅಲ್ಲಿ ತಿಳಿಯಬೇಕಾದುದನ್ನು ತಿಳಿದಾದ ಮೇಲೆ ಸುಂದರಯ್ಯನು ಮಲ್ಲಪುರಕ್ಕೆ ಹೋದನು. ಅಲ್ಲಿರುವ ಅವನ ಸ್ನೇಹಿತನಾದ ಭದ್ರಯ್ಯನು ಕೂಡಾ ಬಹಳ ಕಾಲದ ಮೇಲೆ ಬಂದ ಸುಂದರಯ್ಯನನ್ನು ಸ್ನೇಹ ಸಾದರಾಭಿಮಾನಗಳಿಂದ ಆದರಿಸಿದನು.

ಆ ಊರಿನಲ್ಲಿ ಭದ್ರಯ್ಯನಿಗೆ ಒಳ್ಳೆಯ ಹೆಸರು, ದೊಡ್ಡ ಗೌರವಪ್ರತಿಷ್ಠೆಗಳಿದ್ದುವು. ಊರೊಳಗೆ ಯಾವ ವ್ಯವಹಾರ ನಡೆಯುವುದಾದರೂ, ಊರವರು ಭದ್ರಯ್ಯನ ಆಲೋಚನೆ ಕೇಳದೆ ಮುಂದು ವರಿಯುತ್ತಿದ್ದಿಲ್ಲ.

"ಭದ್ರಯ್ಯಾ, ನೀನು ಎಷ್ಟು ದೊಡ್ಡವನೆನಿಸಿದರೂ ಆ ಚಂದ್ರಕಾಂತನಿಗಿರುವಷ್ಟು ವೈಭವ ನಿನಗಿದೆಯೆಂದು ಹೇಳಲಾರೆ" ಎಂದನು ಸುಂದರಯ್ಯ.

"ನನಗೇನು ಕಡಿಮೆಯಾಗಿದೆ ಎನ್ನುವಿ ?" ಎಂದು ಭದ್ರಯ್ಯ ರೇಗಿದ ಹಾಗೆ ಕೇಳಿದನು.

"ನಿನ್ನ ಆಸ್ತಿ ಪೂರಾ ಕಳೆಸಿದರೂ ಅವನಿಗಿರುವ ಕುದುರೆಗಳ ಬೆಲೆಯಾಗದು. ಲಕ್ಷ ವರಹ ಬೆಲೆ ತಾಳುವಂತಹ ಉತ್ತಮ ಜಾತಿಯ ಹದಿನೈದು ಕುದುರೆಗಳು ಅವನಿಗಿವೆ. ಅದೊಂದು ಅಪೂರ್ವ ವೈಭವ" ಎಂದನು ಸುಂದರಯ್ಯ.

ಭದ್ರಯ್ಯನು ಒಂದು ಕ್ಷಣ ತಾಳಿ, "ಗೊತ್ತಾಯಿತು ಬಿಡಯ್ಯ. ಚಂದ್ರಕಾಂತನದೆಲ್ಲಾ ಹೊರಗಿನ ಆರ್ಭಟೆ, ಅಷ್ಟೇ. ತನ್ನ ಹಣವನ್ನೆಲ್ಲಾ ವಸ್ತುಗಳ ರೂಪಕ್ಕೆ ಬದಲಾಯಿಸಿ ಎಲ್ಲರ ಮುಂದೂ ಪ್ರದರ್ಶಿಸಿಕೊಂಡಿ





ದ್ದಾನೆ. ಮನಸ್ಸು ಮಾಡಿದರೆ ಅದಕ್ಕಿಂತ ಒಳ್ಳೆಯ ಕುದುರೆಗಳನ್ನು ನಾನೂ ಕೊಂಡುಕೊಳ್ಳ ಬಲ್ಲೆ. ಅದರಿಂದ ಪ್ರಯೋಜನವೇನಿದೆ ? ನನ್ನ ಮಗ ದಿನ ವಿಡೀ ಕುದುರೆಯ ಸವಾರಿ ಮಾಡುತ್ತಾ ಅಪ್ರಯೋಜಕನಾಗಿ ತಿರುಗುವುದು ನನಗಿಷ್ಟವಿಲ್ಲ" ಎಂದನು.

ಭದ್ರಯ್ಯನು ಅಷ್ಟಕ್ಕೆ ಬಿಡದೆ ಎಲ್ಲದರಲ್ಲಿಯೂ ಚಂದ್ರಕಾಂತನ ಮೇಲೆ ತಪ್ಪು ಹಾಕಿದನು. ಮನೆ ತುಂಬಾ ದಾಸದಾಸಿಯರಿದ್ದರೆ, ಮನೆಯ ಅಸಲು ಜನರು ಉದಾಸೀನದಿಂದ ಮೈಗಳ್ಳರಾಗಿ ಬಿಡುತ್ತಾರಂತೆ. ಪ್ರತಿ ನಿತ್ಯ ಪಂಚಭಕ್ಷ್ಯ ಪರಮಾನ್ನಗಳ ಭೋಜನದಿಂದ ಆರೋಗ್ಯ ಹಾಳಾಗುವುದೆಂದು ಹೇಳುತ್ತಾನೆ. ನಾಲ್ಕು ಅಂತಸ್ತುಗಳ ಮನೆ ಕಟ್ಟಿಸಿಕೊಂಡರೆ, ಅದು ಜರಿದು ಬೀಳುವ ಅಪಾಯವೂ ಇದೆಯಂತೆ. ಆದುದರಿಂದಲೇ ತನ್ನ ಹತ್ತಿರ ಚಂದ್ರಕಾಂತನಿಗಿಂತಲೂ ಹೆಚ್ಚಿಗೆ ಹಣವಿದ್ದರೂ ಸಹ, ಸಾಮಾನ್ಯವಾದ ಜೀವನವನ್ನೇ ನಡೆಸಿಕೊಂಡಿದ್ದೇನೆಂದು ಭದ್ರಯ್ಯನು ಹೇಳಿದನು.

ಭದ್ರಯ್ಯನು ಹೇಳಿದ ಎಲ್ಲಾ ಮಾತುಗಳಿಗೂ ಅವನ ಮಗನಾದ ರುದ್ರಯ್ಯನೂ ಸೈ ಗುಟ್ಟಿಕೊಂಡೇ ಇದ್ದನು. ತಂದೆಗೆ ತಕ್ಕ ಮಗನೇ ಸರಿ,

ಸುಂದರಯ್ಯನು ತನ್ನ ಮಗಳನ್ನು ಕುರಿತು ಭದ್ರಯ್ಯನೊಂದಿಗೆ ಹೇಳಲಿಲ್ಲ. ಅಲ್ಲಿ ಅವನು ಎರಡು ದಿನಗಳ ವರೆಗೆ ಇದ್ದು, ಆಮೇಲೆ ಅಲ್ಲಿಂದ ವರುಣಪಟ್ಟಣವೆಂಬ ಊರಿಗೆ ಹೋದನು.

ಅಲ್ಲಿ ಅವನ ಚಿಕ್ಕಂದಿನ ಸ್ನೇಹಿತನಾದ ನಾಗಾನಂದನು ಬಹಳ ಸಾಮಾನ್ಯ ರೀತಿಯಲ್ಲಿ ಜೀವನ ನಡೆಸಿಕೊಂಡಿದ್ದನು. ಅವನು ಸುಂದರಯ್ಯನನ್ನು ಅಪ್ಯಾಯತೆಯಿಂದ ಆದರಿಸಿ, ಕುಶಲ ವಿಚಾರಿಸಿ, ಹಾಗೆಯೇ ತನ್ನ ಸಂಗತಿಯನ್ನು ಕುರಿತು ಹೇಳಿದನು. ಮಧ್ಯದಲ್ಲಿ ಚಂದ್ರಕಾಂತನ ಸಂಗತಿಯೂ, ಭದ್ರಯ್ಯನ ಸಮಾಚಾರವೂ ತಲೆ ಹಾಕಿದಾಗ, ಆ ವಿಷಯದಲ್ಲಿ ಹೆಚ್ಚು ಮಾತಿಗೆ ಇಷ್ಟವಿಲ್ಲದವನಂತೆ ನಿಟ್ಟುಸಿರು ಬಿಟ್ಟು ಸುಮ್ಮನಾಗಿ, ಬೇರೆ ವಿಷಯವನ್ನು ಎತ್ತಿದನು.

ಆಗ ನಾಗಾನಂದನ ಮಗ ಸತ್ಯಾನಂದನು, "ಚಂದ್ರಕಾಂತರ ಸಂಗತಿ ನೆನೆಯುವಾಗ, ನನಗೆ ಕೂಡಾ ಅವರ ಮಗ ಪುಷ್ಪಕಾಂತನ ಹಾಗೆ ವೈಭವವಾಗಿ ಜೀವನ ನಡೆಸಬೇಕೆಂತಲೇ ಕಾಣುತ್ತದೆ. ಅದಕ್ಕಾಗಿ ನಾನು ಕೆಲವು ಪ್ರಯತ್ನಗಳನ್ನೂ ಮಾಡಿದೆನು, ಅದು ಸ್ವಲ್ಪ ಮಾತ್ರವೇ ಫಲಿಸಿತು. ಪೂರ್ತಿ ಫಲಿಸಬೇಕಾದರೆ ದಂಡಿಯಾಗಿ ಹಣಬೇಕಾಗುತ್ತದೆ. ಅಷ್ಟು ಹಣ ಸೇರಿಸಬೇಕಾದರೆ ಎಂತಹ ಕೆಲಸ ಮಾಡಲಿಕ್ಕೂ ಲಜ್ಜೆ ಪಡಬಾರದು. ಈ ವರುಣ ಪಟ್ಟಣವು ನಮಗೆ ಚೆನ್ನಾಗಿ ತಿಳಿದ ಊರಾದುದರಿಂದ, ನಾನು ಬೇರೆ ಯಾವುದಾದರೂ ಊರಿಗೆ ಹೋಗಬೇಕೆಂದು ಕಾಣುತ್ತದೆ. ಆದರೆ ಅಪ್ಪನಿಗೆ ಆರೋಗ್ಯ ಚೆನ್ನಾಗಿಲ್ಲದ್ದರಿಂದ, ನಾನು ಇಲ್ಲೇ ಇರಬೇಕಾಗಿ ಬಂದಿದೆ" ಎಂದನು.



ಸುಂದರಯ್ಯನು ಅಲ್ಲಿ ಕೂಡಾ ತನ ಮಗಳ ಸಮಾಚಾರವನ್ನು ಎತ್ತಲಿಲ್ಲ. ಎರಡು ದಿನ ಅಲ್ಲಿದ್ದ ಮೇಲೆ ಅಲ್ಲಿಂದ ಹೊರಟು, ಕೃಷ್ಣಪ್ರಸ್ಥ ನಗರದಲ್ಲಿರುವ ತನ್ನ ನಾಲ್ಕನೆಯ ಬಾಲ್ಯಮಿತ್ರನಾದ ಸೋಮರಾಜನ ಮನೆಗೆ ಹೋದನು.

ಸೋಮರಾಜನ ಜೀವಿತ ವಿಧಾನ ಇನ್ನೂ ಸಾಮಾನ್ಯ ರೀತಿಯದಾಗಿದ್ದಿತು. ಸುಂದರಯ್ಯನಿಗೆ ಆವನ ಮನೆಯಲ್ಲಿ ತಂಗಲಿಕ್ಕೆ ಕೂಡಾ ಸಂಕೋಚ ವಾಯಿತು. ಆದರೆ ಸೋಮರಾಜನು ಅವನನ್ನು ಅತ್ಯಂತ ಆದರಿಂದ ಬರಮಾಡಿಕೊಂಡು ಉಪಚರಿಸಿದನು. ಎರಡು ದಿನಗಳ ವರೆಗೆ ಯಾವ ಕೊರತೆಯೂ ಬಾರದಂತೆ ಆದರಿಸಿದನು.

ಸೋಮರಾಜನೂ, ಅವನ ಮಗ ಭೀಮರಾಜನೂ ಒಂದೇ ಬಗೆಯ ಆಶಯಗಳುಳ್ಳವರಾಗಿದ್ದರು. ಮನುಷ್ಯನು ಸುಖವಾಗಿ ಜೀವಿಸಿರಲಿಕ್ಕೆ ತೃಪ್ತಿಯೇ ಮುಖ್ಯವಾಗಿರಬೇಕೆಂದು ಅವರ ಗಟ್ಟಿ ನಂಬುಗೆ. ಇರುವುದರಲ್ಲಿ ತೃಪ್ತಿ ಪಡುತ್ತ, ಬಿಡುವಿನ ವೇಳೆಯಲ್ಲಿ ಈ ಪ್ರಪಂಚವನ್ನು ಅರ್ಥ ಮಾಡಿಕೊಳ್ಳಲು, ಒಳ್ಳೊಳ್ಳೆಯ ಗ್ರಂಥಗಳನ್ನು ಓದುತ್ತ ಕಾಲ ಕಳೆಯುತ್ತಿದ್ದರು. ಇಬ್ಬರೂ ಯಾವಾಗಲೂ ಸಂತೋಷವಾಗಿಯೇ ಕಾಣಿಸುತ್ತಿದ್ದರು.

ಸೋಮರಾಜನ ಹೆಂಡತಿ ಮಾತ್ರ ತನಗೆ ನಗನಟ್ಟುಗಳಿಲ್ಲವೆಂದೂ, ದೊಡ್ಡ ಮನೆ, ದಾಸದಾಸಿಯರು ಇಲ್ಲವೆಂದೂ ನೊಂದುಕೊಂಡು ಗೊಣಗುತ್ತಿದ್ದಳು. ಸೋಮರಾಜನು ಸುಂದರಯ್ಯನ ಇದಿರಿನಲ್ಲೇ ತನ್ನ ಹೆಂಡತಿಯನ್ನು ನೋಡಿ, "ಆಶೆಗೆ ಒಂದು ಅಂತ್ಯವಿರುವುದಿಲ್ಲ. ಬೇಕಾದ್ದೆಲ್ಲಾ ಬಂತು ಅಂತ ಆದ ಮೇಲೆ, ಈ ದೇಶಕ್ಕೆ ರಾಣಿಯಾಗಬೇಕೆಂದೂ ಕಂಡುಬಿಡುತ್ತದೆ. ಕೇಳಿದೆಯೇನೇ ? ಯಾವುದೋ ಒಂದು ದಶೆಯಲ್ಲಿ ಮನುಷ್ಯನಿಗೆ ಅಸಂತೃಪ್ತಿ ಬಂದೇ ಬರುತ್ತದೆ. ಅದಕ್ಕೆಲ್ಲ ಮೂಲವಾದ ಆಶೆಯನ್ನು ಅಡಗಿಸಿಬಿಟ್ಟರೆ, ಯಾವ ಚಿಂತೆಯೂ ಇರಲಾರದು ಎಂದು ಜ್ಞಾನಿಗಳು ಹೇಳುತ್ತಾರೆ. ಹೀಗಾಗಲು ಗಟ್ಟಿ ಮನಸ್ಸಿನಿಂದ ಸ್ವಲ್ಪ ಅಭ್ಯಾಸವಾದರೇ ಸಾಕು" ಎಂದನು.

ಸುಂದರಯ್ಯ ಅಲ್ಲಿಂದ ಹೊರಟು ತನ್ನ ಊರಿಗೆ ಹೋಗಿ, ತನ್ನ ಹೆಂಡತಿಯೊಂದಿಗೆ, ನಾಲ್ಕು ಮಂದಿ ಮಿತ್ರರ ಮಗಂದಿರನ್ನು ಕುರಿತು ಹೇಳಿ, "ನಮ್ಮ ಮಗಳಿಗೆ ನಾಗಾನಂದನ ಮಗ ಸತ್ಯಾನಂದನೇ ತಕ್ಕ ವರನೆಂದು ನನಗೆ ಕಾಣುತ್ತದೆ. ನಿನಗೆ ಹೇಗೆ ಕಾಣುತ್ತದೆ ?" ಎಂದನು.

ಗಂಡನ ನಿರ್ಣಯ ಸರಿಯೆಂದೇ ಹೆಂಡತಿಯೂ ಅಂದಳು. ಆದರಂತೆ ಕಲ್ಯಾಣ ಕಾರ್ಯದ ಮಾತುಕತೆ ಪ್ರಾರಂಭವಾಗಿ ಯಾವ ತಡೆಯೂ ಇಲ್ಲದೆ ಸುಂದರಯ್ಯನ ಮಗಳು ಚಂಪೆಯ ಮದುವೆ ಸತ್ಯಾನಂದನೊಂದಿಗೆ ವೈಭವದಿಂದ ನಡೆಯಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಸುಂದರಯ್ಯನ ಚಿಕ್ಕಂದಿನ ಸ್ನೇಹಿತರ ಕುಮಾರರನ್ನು

ಕುರಿತು ಅವನು ತಪ್ಪಾಗಿ ಲೆಕ್ಕ ಹಾಕಿದನೆಂದು ನನಗೆ ಸಂಶಯವಾಗಿದೆ. ಪುಷ್ಪಕಾಂತನು ಬಹಳ ವೈಭವ ಜೀವನ ನಡೆಸುತ್ತಾನೆ. ಭದ್ರಯ್ಯನಿಗೂ ಅವನ ಮಗನಿಗೂ ಸ್ವಲ್ಪವೂ ದುರಾಶೆಯಿದ್ದಂತೆ ಕಾಣುವುದಿಲ್ಲ. ಸಾಕಷ್ಟು ಧನ ಸಂಪನ್ನನ್ನಾಗಿಯೂ ಇದ್ದನು, ಸೋಮರಾಜನೂ ಅವನ ಮಗ ಭೀಮರಾಜನೂ, ಒಳ್ಳೊಳ್ಳೆಯ ಪುಸ್ತಕಗಳನ್ನು ಓದಿಕೊಂಡು ಪ್ರಪಂಚವನ್ನು ಅರ್ಥ ಮಾಡಿಕೊಳ್ಳುವ ಒಳ್ಳೆಯವರಾಗಿದ್ದಾರೆ. ಇವರನ್ನೆಲ್ಲ ಬಿಟ್ಟು ಸುಂದರಯ್ಯ ತನ್ನ ಮಗಳನ್ನು ಸತ್ಯಾನಂದನಿಗೆ ಕೊಟ್ಟು ಮದಾವೆ ಮಾಡಿದುದರಲ್ಲಿ ಸಮಂಜಸತೆ ಏನಿದೆ ? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದೂ ಹೇಳದಿದ್ದರೆ ನಿನ್ನ ತಲೆ ಒಡೆದು ಚೂರು ಚೂರಾಗುತ್ತದೆ !" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು : ಸುಂದರಯ್ಯನ ನಿರ್ಣಯದಲ್ಲಿ ಯಾವ ತಪ್ಪೂ ಇಲ್ಲ. ಅವನ ಆರಿಕೆ ನೂರಕ್ಕೆ ನೂರು ಸರಿಯಾದುದೇ. ಸುಂದರಯ್ಯನಿಗಿರುವ ಆಸ್ತಿ ಪುಷ್ಪಕಾಂತನ ದೃಷ್ಟಿಯಲ್ಲಿ ತೀರ ಅಲ್ಪವಾಗಿ ಕಂಡಿದೆ. ಚಂಪ ಅವರ ಮನೆಗೆ ಕಾಲಿಟ್ಟರೆ ಅವರ ಬೆಲೆ ಬಾಳುವ ಒಂದು ಕುದುರೆಯ ಹಾಗೇ ಆಗುತ್ತಾಳೆ. ಅವಳು ಮಾನವಿಯಾಗಿ ಅವನ ಕಣ್ಣಿಗೆ ಕಾಣಿಸಲಾರಳು. ಭದ್ರಯ್ಯನ ವಿಷಯಕ್ಕೆ ಬಂದರೆ ಅವನಲ್ಲಿ ಪ್ರಾಮಾಣಿಕತೆಯೇ ಕಾಣುವುದಿಲ್ಲ, ತನ್ನಲ್ಲಿ ಯಾವುದು ಇಲ್ಲವೋ ಅದೆಲ್ಲಾ ಬೇಡದ ವಸ್ತುಗಳೆಂದೇ ಅವನ ಭಾವನೆ. ತನ್ನ ಲೋಪವನ್ನು ಒಪ್ಪಿಕೊಳ್ಳುವವನಲ್ಲ. ಇನ್ನು ಭೀಮರಾಜನಿಗೆ ಯಾವ ಆಶೆಯಾಗಲಿ, ಯಾವುದರ ಆಕರ್ಷಣೆಯಾಗಲಿ, ಅಭಿರುಚಿಯಾಗಲಿ ಇಲ್ಲ. ಇಂತಹವನು ಮದುವೆ ಮಾಡಿಕೊಂಡರೆ ಹೆಂಡತಿಗೆ ಬಹಳ ಯಾತನೆ ಅನುಭವಿಸ ಬೇಕಾಗುತ್ತದೆ. ಆದರೆ ಸತ್ಯಾನಂದನಿಗೆ ದೊಡ್ಡವರನ್ನು ನೋಡಿ ಅಸೂಯೆಯಾಗುವುದಕ್ಕೆ ಬದಲು ಅವರೊಂದಿಗೆ ಸ್ಪರ್ಧೆಗೆ ಬೀಳುವ ಗುಣವಿದೆ. ಅವನಿಗೆ ಅವರ ಹಾಗೆ ಕೃಷ್ಟಪಟ್ಟು ಕೆಲಸ ಮಾಡಿ ದೊಡ್ಡವನಾಗಬೇಕೆಂಬ ಆಶೆಯಿದೆ. ಆದರೆ ಜೀವಿತದಲ್ಲಿ ಯಾವುದನ್ನೂ ಅಂಟಿಸಿಕೊಳ್ಳದೆ, ಹಣಕ್ಕಾಗಿಯೇ ಕೆಲಸ ಮಾಡುವ ಆಶೆಯ ಹೃದಯ ಅವನಿಗಿಲ್ಲ. ತಂದೆಯ ಆರೋಗ್ಯ ಚೆನ್ನಾಗುವ ವರೆಗೂ ತಂದೆಯ ಹತ್ತಿರವಿದ್ದು ಸೇವೆ ಮಾಡಬೇಕೆಂಬ ಪಿತೃಭಕ್ತಿಯುಳ್ಳವನು. ಅಂತಹವನು ಮಾಮಯ್ಯನಿಂದ ಬರುವ ಧನದೊಂದಿಗೆ ಯಾವ ಕಾಲಕ್ಕಾದರೂ ಚಂದ್ರಕಾಂತನನ್ನು ಮೀರಿಸುವ ವೈಭವದಿಂದ ಬದುಕಲು ಸಮರ್ಥನಾಗಿರುವನು ".

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು.





# ಸ್ನೇಹಧರ್ಮ

ಅನೇಕ ವರ್ಷಗಳ ಹಿಂದೆ ನಾಗಪಟ್ಟಣದಲ್ಲಿರುವ ರತ್ನವರ್ತಕರಲ್ಲಿ ದೇವಗುಪ್ತನೆಂಬ ವರ್ತಕನು ಬಹು ದೊಡ್ಡವನಾಗಿದ್ದನು. ಅವನು ಬಾಲ್ಯದಲ್ಲಿ ನಾಗಪಟ್ಟಣದ ರಾಜನಾದ ವಿಜಯಶೀಲನೊಂದಿಗೆ, ಒಂದೇ ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡಿದವನು. ಆದುದರಿಂದ ರಾಜನೊಂದಿಗೆ ಅವನಿಗೆ ಬಹಳ ಸಲಿಗೆಯೂ ಸ್ನೇಹವೂ ಇದ್ದಿತು.

ದೇವಗುಪ್ತನ ವರ್ತಕದ ವ್ಯಾಪ್ತಿ ಊರೊಳಗೆ ಮಾತ್ರವಲ್ಲದೆ, ಸಮುದ್ರ ವ್ಯಾಪಾರವೂ ಇದ್ದುದರಿಂದ, ದೇಶಾಂತರಗಳಲ್ಲಿಯೂ ಹರಡಿತ್ತು. ಒಂದು ಸಾರಿ ಅವನು ಹಡಗಿನಲ್ಲಿ ಪ್ರಯಾಣ ಮಾಡುವುದಕ್ಕೆ ಮೊದಲು ರಾಜನನ್ನು ನೋಡಲು ಹೋದನು. ಪಟ್ಟಾಭಿಷೇಕವಾಗಿ ರಾಜ್ಯಪಾಲನೆಯ ಭಾರ ಬಿದ್ದರೂ ಸಹ ಕಡಿಮೆಯಾಗದೆ ಗಾಢವಾಗಿಯೇ ಇದ್ದಿತು.

ವಿಜಯಶೀಲನು ಅವನನ್ನು ಬಹಳ ಆದರ ಪೂರ್ವಕವಾಗಿ ಬರಮಾಡಿಕೊಂಡು, ಅವನ ಸಂಗತಿಯನ್ನು ತಿಳಿದು ಏನೋ ಯೋಚಿಸಿ, "ಈ ಸಮುದ್ರ ಪ್ರಯಾಣವು ಬಹಳ ಶ್ರಮದಿಂದ ಕೂಡಿದ ಕೆಲಸ. ನಾವಿಬ್ಬರೂ ಈಗ ಸುಮಾರಾಗಿ ವೃದ್ಧಾಪ್ಯಕ್ಕೆ ಕಾಲಿಟ್ಟಿದ್ದೇವಷ್ಟೆ ? ಈ ವಯಸ್ಸಿನಲ್ಲಿ ಈ ಬಗೆಯ ಕಾರ್ಯಗಳನ್ನು ನಿನ್ನ ಮಗಂದಿರ ಮೇಲೆ ಹಾಕಿ ನೀನೇಕೆ ವಿಶ್ರಾಂತಿ ತೆಗೆದುಕೊಳ್ಳಬಾರದು ? ಅವರಿಗೂ ತಮ್ಮ ಜವಾಬ್ದಾರಿಕೆ ತಿಳಿಯುವುದು ಒಳ್ಳೆಯದಲ್ಲವೇ?" ಎಂದನು.

"ಮಹಾರಾಜಾ, ಅದನ್ನು ನಾನೂ ಯೋಚಿಸಿದ್ದೇನೆ. ವ್ಯಾಪಾರ ಕಾರ್ಯದಲ್ಲಿ ಈಗ ನಾನು ಕೈಕೊಂಡ ಪ್ರಯಾಣವು ಇದೇ ಕಡೆಯದು. ನನ್ನೊಂದಿಗೆ ಮಗನನ್ನೂ ಕರೆದುಕೊಂಡು ಹೋಗುತ್ತೇನೆ. ಅವನಿಗೆ ವೃತ್ತಿಯ ಮೇಲೆ ಬೇಕಾದಷ್ಟು ಉತ್ಸಾಹವಿದ್ದರೂ, ತಕ್ಕಷ್ಟು ಅನುಭವ ಮಾತ್ರ ಇಲ್ಲ. ಈ ಪ್ರಯಾಣವು ಅವನಿಗೆ ತುಂಬಾ ಅನುಭವ ಕೊಡುತ್ತದೆಂದು ನಾನು ನಂಬುತ್ತೇನೆ. ಆಮೇಲೆ ನೀವು ಹೇಳಿದ ಹಾಗೆ ನಾನು ಪೂರ್ತಿ ವಿಶ್ರಾಂತಿ ತೆಗೆದುಕೊಳ್ಳುತ್ತೇನೆ" ಎಂದನು ದೇವಗುಪ್ತ.

ಆಮೇಲೆ ಅವನು ರಾಜನಿಂದ ಅಪ್ಪಣೆ ಪಡೆದು ಮಗನೊಂದಿಗೆ ಹಡಗಿನಲ್ಲಿ ಪ್ರಯಾಣ ಮಾಡಿ, ಅನೇಕ ದ್ವೀಪಗಳಲ್ಲಿ ಲಾಭದಾಯಕವಾಗಿ ಸರಕುಗಳ ಕ್ರಯವನ್ನೂ ವಿಕ್ರಯವನ್ನೂ ಮಾಡಿ, ಒಂದು

ಎಂ. ಕೆ. ಸುಬ್ಬಾರಾವ್.

ವರ್ಷದ ಮೇಲೆ ನಗರಕ್ಕೆ ಹಿಂದಿರುಗಿ ಬಂದನು. ಈ ಮಧ್ಯ ಕಾಲದಲ್ಲಿ ವಿಜಯಶೀಲ ರಾಜನು ತೀರಿ ಹೋಗಿ, ಅವನ ಕುಮಾರನಾದ ಜಯಶೀಲನು ರಾಜನಾಗಿದ್ದನು. ದೇವಗುಪ್ತನು ತನ್ನ ಬಾಲ್ಯಮಿತ್ರನಾದ ವಿಜಯ ಶೀಲ ರಾಜನ ಮರಣವನ್ನು ತಿಳಿದು, ತುಂಬಾ ದುಃಖಿಸಿದನು. ಹೊಸ ರಾಜನಾದ ಜಯಶೀಲನ ಪರಿಪಾಲನೆಯಲ್ಲಿ ದೇಶದೊಳಗೆ ಬಂದ ಬದಲಾವಣೆಗಳನ್ನು ತಿಳಿಯಲು ಅವನಿಗೆ ಬಹಳ ದಿನ ಬೇಕಾಗಲಿಲ್ಲ. ರಾಜಕುಟುಂಬಕ್ಕೆ ಆಪ್ತನಾದುದರಿಂದ ದೇವಗುಪ್ತನು ಈಗಿನ ಹೊಸ ರಾಜನನ್ನು ನೋಡಲು ಒಂದು ದಿನ ಅರಮನೆಗೆ ಹೋದನು.

ಕುಶಲ ಪ್ರಶ್ನೆಗಳೂ, ದುಃಖಾನು ತಾಪಗಳೂ ಮುಗಿದ ಮೇಲೆ, ಜಯಶೀಲನು ದೇವಗುಪ್ತನೊಂದಿಗೆ, ತನ್ನ ಪರಿಪಾಲನೆ ಹೇಗಿರುವುದೆಂದು ಕೇಳಿದನು. ಅದಕ್ಕೆ ದೇವಗುಪ್ತನು,

"ಬಹಳ ಚೆನ್ನಾಗಿಯೇ ಇದೆ. ಹಿಂದಿನ ಪರಿಪಾಲನೆಗೂ, ಈಗಿನದಕ್ಕೂ ಹೊಸ ಬಗೆಯ ವ್ಯತ್ಯಾಸವೇ ಕಾಣುತ್ತದೆ. ಕೆಲವು ಮಂದಿ ರಾಜೋದ್ಯೋಗಿಗಳ ಪುಣ್ಯವೋ ಎಂಬಂತೆ ವ್ಯಾಪಾರಸ್ಥರು ನಿಮ್ಮ ತಂದೆಯ ಕಾಲದಲ್ಲಿ ಒಂದು ದೀನಾರ ಮಾತ್ರವೇ ಲಾಭ ಪಡೆಯುವಂತಹ ಸರಕುಗಳ ಮೇಲೆ, ಈಗ ಹತ್ತು ದೀನಾರ ಲಾಭ ಅರ್ಜಿಸಲು ಸಾಧ್ಯವಾಗಿದೆ. ರಕ್ಷಕ ಭಟರನ್ನೂ ಕೋತ್ವಾಲರನ್ನೂ ನೋಡಿ ಆ ಕಾಲದಲ್ಲಿ ಅಪರಾಧಿಗಳು ಮಾತ್ರವೇ ಹೆದರುತ್ತಿದ್ದರು. ಈಗ ಪುರಜನರು ಕೂಡಾ ಅವರನ್ನು ನೋಡಿ ಹೆದರಿ ನಡುಗುತ್ತಾರೆ. ಇನ್ನು ಆ ಕಾಲದಲ್ಲಿ ದೈವ ದೇವರ ದರ್ಶನಕ್ಕೆ ಮಾತ್ರ ಮುಡಿಪು ಸಲಿಸಿ, ನಮ್ಮ ಜಿಪುಣ ತನವನ್ನು ತೋರಿಸುತ್ತಿದ್ದೆವು. ಈಗ ರಾಜನಿಗೂ ದೈವ ದೇವರುಗಳಿಗೂ ವ್ಯತ್ಯಾಸವಿಲ್ಲವೆಂದು ನಂಬಿಸುವುದರಲ್ಲಿ ನಿಮ್ಮ ದ್ವಾರಪಾಲಕರು ವಿಜಯಿಗಳಾಗಿದ್ದಾರೆ" ಎಂದನು.

ಈ ಮಾತಿನಿಂದ, ರಾಜೋದ್ಯೋಗಿಗಳು ವ್ಯಾಪಾರಿಗಳಿಂದ ಲಂಚಪಡೆಯುವರೆಂದೂ, ಕೋತ್ವಾಲ ಶಾಖೆಯವರು ಪ್ರಜೆಗಳನ್ನು ಪೀಡಿಸುವರೆಂದೂ, ತನ್ನ ದರ್ಶನಕ್ಕೆ ಬರುವವರ ಕೈಯಿಂದ ದ್ವಾರಪಾಲಕರು ಭಕ್ಷೀಸು ಪದ್ಧತಿಯನ್ನು ತಂದಿರುವರೆಂದೂ ಅರ್ಥವಾಯಿತು. ಅವನು ದೇವಗುಪ್ತನಿಗೆ ತನ್ನ ಕೃತಜ್ಞತೆಯನ್ನು ಹೇಳಿಕೊಂಡು, ಒಂದು ತಿಂಗಳಿನೊಳಗೆ ಅನ್ಯಾಯದ ಉದ್ಯೋಗಸ್ಥರನ್ನೆಲ್ಲಾ ಕಂಡು ಹಿಡಿದು ತೊಲಗಿಸಿ, ಒಳ್ಳೆಯವರನ್ನು ನಿಯಮಿಸಿದನು. ಇದರಿಂದ ಪ್ರಜೆಗಳೆಲ್ಲ ರಾಜನನ್ನು ಮೆಚ್ಚಿಸಿದರು.

ರಾಜ ಕುಟುಂಬದೊಂದಿಗೆ ತನಗಿರುವ ಸ್ನೇಹ ಧರ್ಮವು ಹೀಗೆ ನೆರವೇರಿದುದನ್ನು ನೋಡಿ, ದೇವಗುಪ್ತನಿಗೆ ಸಂತೋಷವಾಯಿತು.





# ಶಕ್ತಿಯ ರಹಸ್ಯ

ಒಂದು ಕಾಲದಲ್ಲಿ ಕೋಸಲ ದೇಶದಲ್ಲಿ ಸಮರ ಪುಂಗವನೆಂಬ ದೊಡ್ಡ ಬಲಿಷ್ಠನೊಬ್ಬನಿದ್ದನು. ಅವನು ಒಳ್ಳೆಯ ದೇಹಾಭ್ಯಾಸ ಮಾಡಿಕೊಂಡು, ತಕ್ಕ ಗುರುವಿನ ಹತ್ತಿರ ಮಲ್ಲಯುದ್ಧವನ್ನು ಕಲಿತು ತೇರ್ಗಡೆಯಾದವನು.

ಅನಂತರ ನಡೆದ ಮಲ್ಲಕಾಳಗ ಸ್ಪರ್ಧೆಗಳಲ್ಲಿ ಸಾಟಿಯಿಲ್ಲದ ಪ್ರಾವೀಣ್ಯತೆಯನ್ನೂ ಪಡೆದನು. ತನ್ನ ಕೋಸಲ ದೇಶದಲ್ಲಿ ಮಾತ್ರವಲ್ಲದೆ, ಸುತ್ತುಮುತ್ತಿನ ರಾಜ್ಯಗಳಲ್ಲಿ ಕೂಡಾ ತನಗೆ ಸರಿಯಾದ ಪ್ರತ್ಯರ್ಥಿ ಯಾರೂ ಇಲ್ಲವೆಂದು ಅವನಿಗೆ ತೋರಿತು.

ತನ್ನ ಸಂಗತಿಯನ್ನು ಯೋಚಿಸುವಾಗ ಸಮರ ಸೇನನಿಗೆ ಒಂದೊಂದು ಸಾರಿ ಆಶ್ಚರ್ಯವಾಗುತ್ತಿತ್ತು. ತನ್ನಿಂದ ಸೋಲಿಸಲ್ಪಟ್ಟವರಲ್ಲಿ ದೊಡ್ಡ ದೊಡ್ಡ ಮಲ್ಲರೂ ಇದ್ದರು, ದೇಹಬಲದಲ್ಲಿ ತನಗಿಂತ ಹೆಚ್ಚಿನವರಾಗಿ ಕಾಣುವವರು ಕೂಡ ತನ್ನ ಕೈಯಲ್ಲಿ ಸೋಲಲು ಕಾರಣವೇನು ? ಅವರೆಲ್ಲ ಮಲ್ಲಯುದ್ಧದ ಪಟ್ಟುಗಳನ್ನು ಚೆನ್ನಾಗಿ ತಿಳಿದವರೇ. ಹೀಗೆ ಎಂತೆಂಥವರೂ ತನ್ನ ಕೈಯಲ್ಲಿ ಸೋಲಬೇಕಾದರೆ, ಅವರಾರೂ ತನಗೆ ತಕ್ಕ ಪ್ರತಿ ಸ್ಪರ್ಧಿಗಳಲ್ಲವೆಂದಾಯಿತು. ಇದು ಅವನಿಗೆ ಸಮಸ್ಯೆಯಂತೆ ಕಾಣುತ್ತಿತ್ತೇ ಹೊರತು ಗರ್ವವೇನೂ ತಲೆಯೆತ್ತಲಿಲ್ಲ. ಒಂದು ಸಾರಿ ಅವನು ತನ್ನ ಗುರುವಾದ ಅಜಿತ ಮಲ್ಲನೊಂದಿಗೆ ಯಾವುದೋ ಮಾತಿನ ಸಂದರ್ಭದಲ್ಲಿ "ಗುರೂಜಿ, ನಾನು ಎಷ್ಟೋ ದೊಡ್ಡ ದೊಡ್ಡ ಮಲ್ಲರನ್ನು ನಿರಾಯಾಸದಿಂದ ಸೋಲಿಸಿದ್ದೇನಷ್ಟೆ ? ಇದೊಂದು ಗರ್ವವೆಂದು ನನಗೆ ಕಾಣುವುದಿಲ್ಲ. ಅವರೆಲ್ಲಾ ನನಗೆ ಸರಿಯಾದ ಪ್ರತಿ ಸ್ಪರ್ಧಿಗಳಲ್ಲವೆಂದೇ ಕಾಣುತ್ತದೆ. ಬಹುಶಃ ದೇಹಶಕ್ತಿಯೊಂದೇ ವಿಜಯಕ್ಕೆ ಕಾರಣವಲ್ಲವೆಂದು ಕಾಣುತ್ತದೆ. ಅಂಥಾದ್ದು ನನ್ನಲ್ಲಿ ಏನಿದೆಯೋ ನನಗೇ ಗೊತ್ತಾಗುವುದಿಲ್ಲ. ಆ ರಹಸ್ಯ ತಮ್ಮಿಂದಲೇ ತಿಳಿಯಬೇಕೆಂದು ಕೇಳುತ್ತೇನೆ" ಎಂದನು.

ಅವನ ಮಾತು ಕೇಳಿ ಅಜಿತಮಲ್ಲನು ನಸುನಗುತ್ತ, "ಮುಖ್ಯವಾಗಿ ಮಲ್ಲಯುದ್ಧದಂತಹವುಗಳಲ್ಲಿ ದೇಹಬಲದೊಂದಿಗೆ ಇತರ ಶಕ್ತಿಗಳೂ ಇರಬೇಕು. ಅದೇನೆಂಬುದನ್ನು ನಾನು ಹೇಳಿದರೂ ನಿನಗೆ ಗೊತ್ತಾಗಲಾರದು. ಅದು ನಿನಗೆ ಗೊತ್ತಾಗಲಿಕ್ಕೆ ಒಂದು ಸಮಯ ಬರಬೇಕು. ಆಗ ತಾನಾಗೇ ನಿನಗೇ

ಜಿ. ರತ್ನ



ಗೊತ್ತಾಗಿಬಿಡುತ್ತೆ. ಅದಕ್ಕಾಗಿ ಸುಮ್ಮನೆ ಯೋಚಿಸಿಕೊಂಡು ಕೊರಗಬೇಕಾಗಿಲ್ಲ" ಎಂದು ಹೇಳಿ ಬೇರೆ ವಿಷಯದ ಮಾತಿಗೆ ತೊಡಗಿದನು.

ಮುಂದೆ ಕೆಲವು ದಿನಗಳ ಮೇಲೆ, ಸಮರಪುಂಗವನು ತನಗೆ ಸರಿಯಾದ ಜೋಡಿ ಯಾವನಾದರೂ ಇರುವನೇ ನೋಡಬೇಕೆಂದು ದೇಶಸಂಚಾರಕ್ಕೆ ಹೊರಟು ನಡೆಯತೊಡಗಿದನು.

ಕೆಲವು ದಿನಗಳಲ್ಲಿ ಅಸ್ಮಕ ರಾಜ್ಯವನ್ನು ತಲಪಿದನು. ಒಂದು ಗುಡ್ಡಗಾಡು ದಾರಿಯಲ್ಲಿ ನಡೆಯುತ್ತಾ ಇರುವಾಗ, ಆಕಸ್ಮಾತ್ತಾಗಿ ನಿಕುಂಭನೆಂಬೊಬ್ಬ ಭಯಂಕರ ರಾಕ್ಷಸನೊಬ್ಬನನ್ನು ಸಂಧಿಸಬೇಕಾಯಿತು.

ಮಹಾಕಾಯನಾದ ಆ ರಾಕ್ಷಸನು ಒಂದು ಬೆಟ್ಟದ ದೊಡ್ಡ ಗುಹೆಯೊಳಗೆ ವಾಸಮಾಡುತ್ತ, ಹಸಿವೆಯಾದಾಗಲೆಲ್ಲಾ ಸಮೀಪದ ಗ್ರಾಮಗಳ ಮೇಲೆ ಬಿದ್ದು, ಕೈಗೆ ಸಿಕ್ಕಿದ ಮನುಷ್ಯರನ್ನೂ ದನ ಎಮ್ಮೆ ಮೊದಲಾದ ಅವರ ಸಾಕು ಪ್ರಾಣಿಗಳನ್ನೂ ಹಿಡಿದುಕೊಂಡು ಹೋಗಿ ತಿಂದು ಬಿದ್ದುಕೊಳ್ಳುತ್ತಾನೆ. ಅಸ್ಮಕದ ರಾಜನಾದ ಅಖಿಲವರ್ಮನು ಆ ರಾಕ್ಷಸನನ್ನು ಕೊಲ್ಲಲು ಅನೇಕ ಸಾರಿ ಸೈನಿಕರನ್ನು ಅವನ ಮೇಲೆ ಕಳುಹಿಸಿದ್ದನು. ಆದರೆ ನಿಕುಂಭನು ಎಷ್ಟು ಮಂದಿ ಸೈನಿಕರು ಆಯುಧಗಳನ್ನೆತ್ತಿಕೊಂಡು ತನ್ನ ಮೇಲೆ ಹಾರಿ ಬರುತ್ತಿದ್ದರೂ, ಒಂದಿಷ್ಟೂ ಲಕ್ಷ್ಯ ಮಾಡದೆ, ಒಂದುಸಾರಿ ಬಾಯಿ ತೆರೆದು ದೊಡ್ಡದೊಂದು ಬೊಬ್ಬೆ ಹೊಡೆಯುವನು. ಆ ಕೂಡಲೇ ಸೈನಿಕರು ಬಿರುಗಾಳಿಗೆ ಹಾರುವ ತರಗೆಲೆಗಳಂತೆ ಪ್ರಾಣ ಭಯದಿಂದ ದಿಕ್ಕು ದಿಕ್ಕಿಗೆ ಚೆಲ್ಲಾಚೆದರಾಗಿ ಓಡಿ ಹೋಗುತ್ತಿದ್ದರು.

ಈ ನಿಕುಂಭನನ್ನು ನೋಡಿದ ಕೂಡಲೇ ಸಮರಪುಂಗವನಲ್ಲಿ ಏನೋ ಒಂದು ಹೊಸ ಉತ್ಸಾಹವು ಏಳುವಂತೆ ತೋರಿತು. ಅಂತಲೇ ತನ್ನ ತೊಡೆಯನ್ನು ತಟ್ಟಿ ಭುಜಗಳನ್ನು ಅಪ್ಪಳಿಸಿ ದೊಡ್ಡದೊಂದು ಗರ್ಜನೆ ಹೊರಡಿಸಿದನು. ಅದನ್ನು ನೋಡಿ ರಾಕ್ಷಸನು ಒಂದು ಕ್ಷಣ ಬೆರಗಾಗಿ, ಸಮರಪುಂಗವನನ್ನು ದಿಟ್ಟಿಸಿ ನೋಡಿ, ತಾನೂ ಒಂದು ಬೊಬ್ಬೆ ಹಾಕಿದನು. ಒಬ್ಬ ಮನುಷ್ಯನು ತನ್ನನ್ನು ಈ ರೀತಿಯಾಗಿ ಇದಿರಿಸಿಕೊಂಡು ಬರುವುದನ್ನು ನೋಡಿ ರಾಕ್ಷಸನಿಗೆ ಆಶ್ಚರ್ಯವಷ್ಟೇ ಆದುದಲ್ಲ; ಅದರೊಂದಿಗೆ ತುಸು ಭಯವೂ, ಏನೋ ಸಂದೇಹವೂ ಬಂತು.

ಸಮರಪುಂಗವನು ತನಗೆ ಸರಿಯಾದ ಜೋಡಿ ಸಿಕ್ಕಿದನೆಂದುಕೊಂಡು ಕುಪ್ಪಳಿಸಿ ಧುಮುಕುತ್ತ ಆ ರಾಕ್ಷಸನನ್ನು ಸಮೀಪಿಸುವಷ್ಟರಲ್ಲಿ, ಅವನ ಕಾಲು ತಗಲಿ ಒಂದು ಬಂಡೆಗಲ್ಲು ಅವನಿಗಿಂತ ಮುಂದಾಗಿ ರಾಕ್ಷಸನ ಕಡೆಗೆ ಉರುಳಿಕೊಂಡು ಹೋಯಿತು. ಅದರಿಂದ ತಪ್ಪಿಸಿಕೊಳ್ಳಲು ರಾಕ್ಷಸನು ಬದಿಗೆ ತಿರುಗಿದನು. ಅಷ್ಟರೊಳಗೆ ಸಮರಪುಂಗವನು ಅವನ ಮೇಲೆ ಹಾರಿ, ಒಂದು ಬಲವಾದ ಮುಷ್ಟಿಘಾತದಿಂದ ಅವನನ್ನು ನೆಲಕ್ಕೆ ಬೀಳಿಸಿದನು.

ಸಮರಪುಂಗವನ ಪೆಟ್ಟಿಗೆ ಮೈಧಿಮ್ಮೆನಿಸಿಕೊಂಡ ರಾಕ್ಷಸನು, ಅದನ್ನು ಸಮಾಳಿಸಿಕೊಂಡು ಏಳುವುದರೊಳಗೆ, ಸಮರಪುಂಗವನ ಕಾಲಿನ ಒದೆಯೂ, ಕೈಗಳ ಗುದ್ದುಗಳೂ ಮೇಲಿಂದ ಮೇಲೆ ಬಲವಾಗಿ ಬೀಳತೊಡಗಿದುವು.

ಇಬ್ಬರ ನಡುವೆ ಸ್ವಲ್ಪ ಹೊತ್ತು, ತೀವ್ರವಾದ ಹೋರಾಟ ನಡೆದ ಮೇಲೆ, ಸಮರ ಪುಂಗವನ ಏಟುಗಳಿಂದ, ಅಮುಕು ಕಿವಿಚುಗಳಿಂದ ರಾಕ್ಷಸನು ಪೂರ್ತಿ ಪ್ರಾಣಬಿಟ್ಟು, ಅಚಲನಾದನು. ಆದರೆ ಸಮರ ಪುಂಗವನು ಕೂಡಾ ರಾಕ್ಷಸನ ಪೆಟ್ಟುಗಳಿಂದ ತೀವ್ರವಾಗಿ ಗಾಯಗೊಂಡು ಏಳಲಾಗದಂತೆ ಅಂಗಾತ ಬಿದ್ದುಬಿಟ್ಟನು.

ದೂರದಲ್ಲಿ ಇದನ್ನು ನೋಡಿದ ಮಹಾರಾಜನ ಚಾರರಿಬ್ಬರು ಓಡುತ್ತಾ, ಹೋಗಿ ಅಖಿಲರಾಜನೊಂದಿಗೆ ನಡೆದ ಸಂಗತಿಯನ್ನು ಹೇಳಿದರು. ರಾಕ್ಷಸನ ಪೀಡೆ ಹೋಯಿತೆಂಬ ಸಂತೋಷದಲ್ಲಿ ರಾಜನ ಮುಖದಲ್ಲಿ ಮಂದಹಾಸ ಸುಳಿಯಿತು, ಮರುನಿಮಿಷದಲ್ಲಿ ರಾಜನು ಆಂದೋಳನೆ ಪಡುತ್ತ ಮಂತ್ರಿಯೊಂದಿಗೆ, "ನಿಕುಂಭನಂತಹ ರಾಕ್ಷಸನನ್ನು ಏಕಾಂಗಿಯಾಗಿ ಕೊಂದವನು, ತನಗೆ ಉಂಟಾದ ಗಾಯಗಳಿಂದ ಬಿದ್ದಿದ್ದಾನಂತೆ. ಇನ್ನು ಅವನು ಚೇತರಿಸಿಕೊಂಡು ಏಳುವುದರೊಳಗೆ ಅವನನ್ನು ಕಡೆಗಾಣಿಸಿಬಿಡಬೇಕು. ಕೂಡಲೇ ಆ ಕೆಲಸ ಮುಗಿಸಬೇಕು. ತ್ವರೆ ಮಾಡಿರಿ !" ಎಂದನು.

ನಿಕುಂಭನಂತಹ ಭಯಂಕರ ರಾಕ್ಷಸನನ್ನು ಕೊಂದು ದೇಶಕ್ಕೆ ಎಷ್ಟೋ ಮೇಲನ್ನುಂಟು ಮಾಡಿದವನನ್ನು, ರಾಜನು ಏಕೆ ಕೊಲ್ಲಲಿಕ್ಕೆ ಹೇಳುತ್ತಾನೆಂದು ಮಂತ್ರಿಗೆ ಅರ್ಥವಾಗಲಿಲ್ಲ.

ರಾಜನೂ ಮಂತ್ರಿಯೂ ಬೇಗಬೇಗನೆ ಸೈನಿಕರನ್ನು ಕೂಡಿಸಿಕೊಂಡು ಬೆಟ್ಟದ ಪ್ರಾಂತಕ್ಕೆ ಹೋದರು. ಅಲ್ಲಿಗೆ ಹೋಗಿ ನೋಡಿದಾಗ ಅನೇಕ ಮಂದಿ ಊರ ಪ್ರಜೆಗಳು ಸಮರಪುಂಗವನ ಸುತ್ತಲೂ ಗುಂಪುಗೂಡಿಬಿಟ್ಟಿದ್ದರು. ಅವರಲ್ಲಿ ಕೆಲವರು ಬಹಳ ಶ್ರದ್ಧೆಯಿಂದ, ನಿಷ್ಠೆಯಿಂದ, ಆಸಕ್ತಿಯಿಂದ ಸಮರಪುಂಗವನ ಗಾಯ



ಗಳಿಗೆ ಮದ್ದು ಹಚ್ಚಿ ಹತ್ತಿ ಬಟ್ಟೆ ಕಟ್ಟುತ್ತಿದ್ದರು. ಸಮರಪುಂಗವನು ಕುಳಿತುಕೊಂಡಿದ್ದನು.

ಅಖಿಲರಾಜನು ಆ ದೃಶ್ಯವನ್ನು ನೋಡಿ, ತನ್ನ ಕತ್ತಿಯನ್ನು ಕೆಳಗೆ ಜಾರಬಿಟ್ಟು, ಸಮರಪುಂಗವನಿಗೆ ನಮಸ್ಕಾರ ಮಾಡಿ, "ನಿಕುಂಭನಂತಹ ರಾಕ್ಷಸನನ್ನು ಕೊಂದ ನೀವು ಅವನಿಗಿಂತಲೂ ಭಯಂಕರರಾಗಿರ ಬೇಕೆಂದು ತಿಳಿದೆನು. ಅಷ್ಟೇ ಅಲ್ಲ, ಒಂದು ಪೀಡೆ ಹೋದರೆ, ಅದಕ್ಕಿಂತ ದೊಡ್ಡ ಇನ್ನೊಂದು ಪೀಡೆ ರಾಜ್ಯಕ್ಕೆ ಬಂತೆಂದು ಭ್ರಮಿಸಿದೆನು. ಗಾಯಗಳ ನೋವಿನಿಂದ ಬಿದ್ದಿರುವ ನೀವು ಏಳುವುದರೊಳಗೇ ನಿಮ್ಮನ್ನು ಕೊಲ್ಲಬೇಕೆಂದೇ ಬಂದಿರುವ ನಾನು ನನ್ನ ದುಡುಕು ಬುದ್ಧಿಗೆ ನಾಚುತ್ತೇನೆ. ಕ್ಷಮಿಸಿ " ಎಂದನು.

"ಇದರಲ್ಲಿ ಕ್ಷಮಿಸಲಿಕ್ಕೇನಿದೆ? ಪ್ರಜೆಗಳ ಕ್ಷೇಮ ವನ್ನು ಬಯಸುವ ರಾಜನಿಗೆ ಬರಬೇಕಾದ ಆಲೋಚನೆಯೇ ನಿಮಗೆ ಬಂದಿದೆ, ಮಹಾರಾಜರೇ !" ಎಂದು ಸಮರಪುಂಗವನು ರಾಜನಿಗೆ ಕೈ ಮುಗಿದನು.

ಇದರಿಂದ ತೃಪ್ತನಾದ ರಾಜನು, "ನೀವು ಯಾರೋ ದೈವಾಂಶ ಸಂಭೂತರೋ ಅಥವಾ ಮಾನವಾತೀತ ಸಿದ್ಧಿ ಶಕ್ತಿಯನ್ನು ಸಾಧಿಸಿದವರೋ ಇರಬೇಕೆಂದು ಕಾಣುತ್ತದೆ. ನಾನು ಕಳುಹಿಸಿದ ದೊಡ್ಡ ದೊಡ್ಡ ಸೇನೆಗಳನ್ನು ಈ ರಾಕ್ಷಸಾಧಮನು ಬರಿಯ ಹೂಂಕಾರ ದಿಂದಲೇ ಓಡಿಸಿದ್ದಾನೆ !" ಎಂದನು.

"ಪ್ರಭೂ, ನನ್ನಲ್ಲಿ ದೈವಾಂಶವೂ ಇಲ್ಲ, ಸಿದ್ಧಿ ಸಾಧನೆಯ ಅತೀತ ಶಕ್ತಿಗಳೂ ಇಲ್ಲ. ದೇಹಶಕ್ತಿಯ ಜತೆಗೆ ಬೇರೆ ಶಕ್ತಿಗಳೂ ಬೇಕೆಂದು ಹೇಳುವ ನನ್ನ ಗುರುಗಳ ಮಾತಿನ ಗುಟ್ಟು ಈಗ ನನಗೆ ಅರ್ಥ ವಾಯಿತು, ಆ ಶಕ್ತಿಗಳು ಮನೋದಾರ್ಢ್ಯತೆ, ಆತ್ಮ ವಿಶ್ವಾಸ, ಹಟ. ಆದುದರಿಂದಲೇ ನನಗೆ ರಾಕ್ಷಸನನ್ನು ನೋಡಿದಾಗ, ನನ್ನೊಂದಿಗೆ ಮಲ್ಲಯುದ್ಧಕ್ಕೆ ಸರಿಯಾದ ಜೋಡಿ ಸಿಕ್ಕಿದನೆಂಬ ಭಾವನೆ ಯುಂಟಾಯಿತೇ ಹೊರತು, ಇವನು ರಾಕ್ಷಸನೆಂಬ ಭೀತಿ ಹುಟ್ಟಲಿಲ್ಲ, ನಿಮ್ಮ ಸೈನಿಕರಲ್ಲಿ ಹಾಗಿರಲಿಲ್ಲ. ಮೊದಲಿನಿಂದಲೇ ಇವನೊಬ್ಬ ಭಯಂಕರ ರಾಕ್ಷಸ ನೆಂಬ ಭಾವನೆಯಿಂದ ಭೀತಿ ಆವರಿಸಿಕೊಂಡೇ ಇದ್ದಿತು, ಆದುದರಿಂದಲೇ ಅವರು ಹೆದರಿ ಓಡುವಂತಾಯಿತು" ಎಂದನು ಸಮರಪುಂಗವ.

ಇಂತಹ ಮಹಾಮಲ್ಲನ ವಿನಯವನ್ನು ನೋಡಿ ರಾಜನಿಗೆ ಬಹಳ ಸಂತೋಷವಾಯಿತು. ಅವನು ಕೂಡಲೇ ಸಮರಪುಂಗವನಿಗೆ ರಾಜಲಾಂಛನಗಳ ಗೌರವ ಸಲ್ಲಿಸಿ, ನಗರಕ್ಕೆ ಮೆರವಣಿಗೆಯ ಮೂಲಕ ಕರೆದೊಯ್ದು, ದೊಡ್ಡ ಸತ್ಕಾರವನ್ನು ಮಾಡಿದನು. ಕೆಲವು ದಿನ ಉಪಚರಿಸಿದ ಮೇಲೆ, ಬಹುಮಾನ ಗಳನ್ನು ಕೊಟ್ಟು ಅವನನ್ನು ಅವನ ಊರಿಗೆ ಕಳುಹಿಸಿಕೊಟ್ಟನು.





# ಕರ್ಮಪರಿಪಾಕ

**ಬುದ್ಧ** ಭಗವಾನನು ಜೀವಿಸಿಕೊಂಡಿದ್ದ ಕಾಲದಲ್ಲಿ, ಅನಾಥಪಿಂಡಕನೆಂಬ ವೈಶ್ಯ ಶ್ರೇಷ್ಠನಿದ್ದನು. ಆತನಿಗೆ ಬುದ್ಧ ಭಗವಾನನ ಮೇಲೆ ಅಪಾರವಾದ ಭಕ್ತಿ ಇದ್ದಿತು. ಬುದ್ಧನು ವಾಸಿಸುವ ಜೇತವನವಲ್ಲಿ ಅನಾಥ ಪಿಂಡಕನು ಐವತ್ತನಾಲ್ಕು ಕೋಟಿ ಖರ್ಚು ಮಾಡಿ ದೊಡ್ಡದಾದ ಆರಾಮ ಮಂಟಪವನ್ನು ಕಟ್ಟಿಸಿದ್ದನು. ಪ್ರತಿ ದಿನ ಮೂರುಸಾರಿ ಅವನು ಬುದ್ಧ ಭಗವಾನನ ದರ್ಶನ ಮಾಡಿ ಬರುವ ಪದ್ಧತಿ ಇಟ್ಟುಕೊಂಡಿದ್ದನು. ಎಂದಾದರೊಂದು ದಿನ ಬುದ್ಧನು ಕೂಡಾ ತನ್ನ ಅನುಚರರೊಂದಿಗೆ ಅನಾಥ ಪಿಂಡಕನ ಮನೆಗೆ ಭಿಕ್ಷೆಗೆ ಬರುವುದೂ ಇತ್ತು.

ಈ ಅನಾಥ ಪಿಂಡಕನಿಗೆ ಭವ್ಯವಾದ ಏಳು ಅಂತಸ್ತುಗಳ ಮಾಳಿಗೆಯ ಮನೆ ಇದ್ದಿತು. ಅದಕ್ಕೆ ಏಳು ಪ್ರಾಕಾರಗಳಿದ್ದುವು. ಅವುಗಳಲ್ಲಿ ಮಧ್ಯಪ್ರಾಕಾರದಲ್ಲಿ ಕ್ಷುದ್ರದೇವತೆಯೊಬ್ಬಳು ತನ್ನ ಅನೇಕ ಸಂತಾನಗಳೊಂದಿಗೆ ಬೀಡುಬಿಟ್ಟಿದ್ದಳು.

ಈ ದೇವತೆಗೆ ಬುದ್ಧನೆಂದರೆ ಆಗದು. ಬುದ್ಧನು ಆಗಾಗ ಆ ಮನೆಗೆ ಬರುತ್ತಿರುವುದನ್ನು ಅವಳಿಂದ ನೋಡಲಾಗುತ್ತಿರಲಿಲ್ಲ. ಅವನು ಬಾರದ ಹಾಗೆ ಹೇಗೆ ಮಾಡುವುದೆಂದು ಅವಳು ಯೋಚಿಸಿಕೊಂಡೇ ಇದ್ದಳು. ಕಡೆಗೆ ಅವಳು ಮಾನವಸ್ತ್ರೀಯ ರೂಪ ಧರಿಸಿ, ಅನಾಥ ಪಿಂಡಕನ ಖಜಾನಾದಾರನ ಬಳಿಗೆ ಹೋಗಿ, "ಈ ಮನೆಗೆ ಆ ಪರದೇಶಿ ಬುದ್ಧನನ್ನು ಏಕೆ ಬರಲಿಕ್ಕೆ ಬಿಡುತ್ತೀರಿ ? ಅಂಥವನು ಹೊಸ್ತಿಲಲ್ಲಿ ಕಾಲಿಡುವುದೇ ಮನೆಗೆ ಕೆಡುಕು !" ಎಂದಳು.

ಅದನ್ನು ಕೇಳಿ ಖಜಾನಾದಾರನು ಅವಳನ್ನು ಬೈದು ಕಳುಹಿಸಿ ಬಿಟ್ಟನು. ತರುವಾಯ ಅವಳು ಅನಾಥ ಪಿಂಡಕನ ಮಗನ ಬಳಿಗೆ ಹೋಗಿ, ಅದೇ ವಿಧವಾಗಿ ಮಾತಾಡಿ, ಅವನಿಂದಲೂ ಬೈಗುಳು ತಿಂದು ಮುಖ ಭಂಗ ಮಾಡಿಕೊಂಡಳು. ಮತ್ತೇನೂ ಮಾಡಲು ತೋರದೆ ಕ್ಷುದ್ರದೇವತೆ ಸುಮ್ಮನಾಗಿ ಬಿಟ್ಟಳು.

ದಾನ ಧರ್ಮ ನಿರತನಾದ ಅನಾಥ ಪಿಂಡಕನಿಗೆ ದಿನದಿಂದ ದಿನಕ್ಕೆ ಖರ್ಚು ಹೆಚ್ಚಾಗುತ್ತಾ ಹೋಗುತ್ತಿದ್ದಿತು. ವರಮಾನವು ತಗ್ಗುತ್ತಲೂ ಇದ್ದಿತು. ಅವನು ವ್ಯಾಪಾರದ ಕಡೆಗೆ ಗಮನ ಕೊಡುತ್ತಿದ್ದಿಲ್ಲ, ಇದರ ಮೇಲೆ ಬೇರೆ ವಿಧಗಳಿಂದಲೂ ಅವನಿಗೆ ನಷ್ಟವಾಗ ತೊಡಗಿತು. ಅವನಂತಹ ಜತೆಯ ವ್ಯಾಪಾರಿಗಳು ಅವನ ಕೈಯಿಂದ ಹದಿನೆಂಟು ಕೋಟಿ

ಧನವನ್ನು ಸಾಲವಾಗಿ ಪಡೆದಿದ್ದರು. ಅದನ್ನು ಅವರು ಹಿಂದಿರುಗಿ ಕೊಡಲೂ ಇಲ್ಲ; ಅವನು ಕೇಳಲೂ ಇಲ್ಲ. ಮತ್ತೊಂದು ಹದಿನೆಂಟು ಕೋಟಿ ಧನವನ್ನು ಬಿಂದಿಗೆಗಳಲ್ಲಿ ತುಂಬಿಸಿ ಅಚಿರವತೀ ನದಿಯ ತೀರದಲ್ಲಿ ಹುಗಿದಿಟ್ಟಿದ್ದನು. ಒಮ್ಮೆ ನದಿಗೆ ನೆರೆಬಂದಾಗ ತೀರವು ಕರಗಿ ಆ ನಿಧಿ ಬಿಂದಿಗೆಗಳೆಲ್ಲ ನದಿಯಲ್ಲಿ ಕೊಚ್ಚಿಕೊಂಡು ಹೋಗಿ ಸಮುದ್ರವನ್ನು ಸೇರಿ ಬಿಟ್ಟಿದ್ದುವು.

ಇವೆಲ್ಲದರ ಫಲಿತವಾಗಿ ಅನಾಥ ಪಿಂಡಕನು ಕ್ರಮವಾಗಿ ಬಡವನಾಗಿ ಹೋದನು. ಆದರೂ ಅವನು ಭಿಕ್ಷುಕರಿಗೆ ಊಟ ಹಾಕುತ್ತಲೇ ಇದ್ದನು. ಆದರೆ ಹಿಂದಿನ ಔತಣದ ಊಟ ಈಗ ಇರಲಿಲ್ಲ.

ಒಂದು ದಿನ ಬುದ್ಧ ಭಗವಾನನು ಅನಾಥ ಪಿಂಡಕನ ಮನೆಗೆ ಬಂದು ಅವನೊಂದಿಗೆ, "ಇನ್ನೂ ದಾನಗಳನ್ನು ಮಾಡಿಕೊಂಡೇ ಇರುವೆಯಾ ?" ಎಂದು ಕೇಳಿದನು.

ಅನಾಥ ಪಿಂಡಕನು ಬಹಳ ಆವೇದನೆ ಪಡುತ್ತ, "ಸ್ವಾಮಿ, ದಾನವನ್ನೇನೋ ಮಾಡಿಕೊಂಡಿರುವೆನಾದರೂ, ನಾನು ಈಗ ದಾನ ಮಾಡುವುದು ಕೇವಲ ಗಂಜಿ ಮಾತ್ರವೇ" ಎಂದನು.

ಬುದ್ಧನು ಅವನ ನೋವನ್ನು ಗಮನಿಸಿ," ಚಿಂತಿಸಬೇಡವಪ್ಪಾ. ಹೃದಯವು ಒಳ್ಳೆಯದಾಗಿರುವ ಕಾಲದವರೆಗೆ ಮಾಡುವ ದಾನ ಗಂಜಿಯೇ ಆದರೂ ಸಹ ಅದು ಉತ್ತಮವಾಗಿಯೇ ಇರುತ್ತದೆ" ಎಂದು ಸಮಾಧಾನ ಪಡಿಸಿದನು.

ಈ ರೀತಿ ಅನಾಥ ಪಿಂಡಕನು ಬಡವನಾದುದರಿಂದ, ಕ್ಷುದ್ರದೇವತೆ ಧೈರ್ಯದಿಂದ ಅವನಲ್ಲಿ ಹೋಗಿ, "ಈ ಬುದ್ಧನನ್ನು ಇಲ್ಲಿಗೇಕೆ ಬರಲು ಬಿಡುವಿ ? ಹಾಯಾಗಿ ನಿನ್ನ ಪಾಡಿಗೆ ವ್ಯಾಪಾರ ನೋಡಿಕೊಂಡಿರು. ಆಗ ನಿನ್ನ ಕಷ್ಟವೆಲ್ಲ ತೀರುತ್ತದೆ. ಹೋದ ಹಣವನ್ನೆಲ್ಲಾ ತಿರುಗಿ ಸಂಪಾದಿಸು. ನಾನು ನಿನ್ನ ಮನೆಯ ನಾಲ್ಕನೇ ಪ್ರಾಕಾರದಲ್ಲಿರುವ ದೇವತೆ, ನನ್ನ ಮಾತು ಕೇಳು. ನಿನ್ನ ಒಳಿತಿಗಾಗಿಯೇ ಹೇಳುತ್ತೇನೆ" ಎಂದಳು.

ಅನಾಥ ಪಿಂಡಕನಿಗೆ ಕ್ಷುದ್ರ ದೇವತೆಯ ಈ ನುಡಿ ಕೇಳಿ ಕೋಪ ಬಂದು ಅವಳೊಂದಿಗೆ, "ಹಾಗೇನು ?



ಗೊತ್ತಾಯಿತು. ಇನ್ನಾವ ಮಾತನ್ನೂ ಹೇಳದೆ ಕೂಡಲೇ ನನ್ನ ಮನೆಯನ್ನು ಬಿಟ್ಟು ಹೋಗಿಬಿಡು" ಎಂದನು.

ಕ್ಷುದ್ರದೇವತೆಗೂ ಕೋಪ ಬಂತು. "ಹೋಗದೆ ಕುಳಿತುಕೊಳ್ಳುತ್ತೇನೆಂದುಕೊಂಡೆಯಾ ? ನಿನ್ನ ದರಿದ್ರ ಹಿಡಿದ ಮನೆಗಿಂತಲೂ ಒಳ್ಳೇ ಮನೆ ನನಗೆ ಸಿಗುತ್ತದೆ" ಎಂದು ಹೇಳಿ ಆ ಕ್ಷುದ್ರದೇವತೆ ಆಗಲೇ ತನ್ನ ಮಕ್ಕಳ ಗುಂಪನ್ನೆಲ್ಲಾ ಸಾಗಿಸಿಕೊಂಡು ಅನಾಥ ಪಿಂಡಕನ ಮನೆಯನ್ನು ಬಿಟ್ಟು ಹೊರಟುಹೋದಳು.

ಆದರೆ ಅವಳು ಎಲ್ಲೆಲ್ಲೋ ಹೋಗಿ ಎಷ್ಟು ಹುಡುಕಿದರೂ, ಅಷ್ಟೊಂದು ಒಳ್ಳೇ ಮನೆ ಮತ್ತೊಂದು ಅವಳಿಗೆ ಸಿಗಲಿಲ್ಲ. ಅಷ್ಟು ಒಳ್ಳೆಯ ಮನೆಯನ್ನು ಬಿಟ್ಟು ಬಂದುದಕ್ಕೆ ಅವಳಿಗೆ ಪಶ್ಚಾತ್ತಾಪವಾಯಿತು. ರೋಷಗೊಂಡು ಮಾತಾಡಿ ಬಿಟ್ಟು ಬಂದ ಮನೆಗೆ ಮತ್ತೆ ಯಾವ ಮುಖದಿಂದ ಹೋಗುವುದೆಂದು ತಿಳಿಯದೆ. ಅವಳು ತನ್ನ ಗೆಳತಿ ಗ್ರಾಮದೇವತೆಯ ಬಳಿಗೆ ಹೋಗಿ, ತನ್ನ ಸ್ಥಿತಿಯನ್ನು ಹೇಳಿ, ಏನು ಮಾಡಬೇಕೆಂದು ಆಲೋಚನೆ ಕೇಳಿದಳು.

"ಮೊದಲಿದ್ದ ಮನೆಯನ್ನು ಬಿಟ್ಟು ಬಂದದ್ದು ನಿನ್ನದೇ ತಪ್ಪು. ಮತ್ತೆ ಅಲ್ಲಿಗೇ ಹೋಗಬೇಕೆಂದು ಈಗ ನಿನಗೆ ತೋರುವುದರಿಂದ ಆ ಮನೆಯ ಒಡೆಯನದು ಯಾವ ತಪ್ಪೂ ಇಲ್ಲವೆಂದೇ ಆಯಿತು. ಒಂದು ಕೆಲಸ ಮಾಡು. ಅನಾಥ ಪಿಂಡಕನಿಗೆ ವರ್ತಕರು ಹದಿನೆಂಟು ಕೋಟಿ ಧನ ಬಾಕಿ ಮಾಡಿಕೊಂಡಿದ್ದಾರಷ್ಟೆ ? ನೀನು ಅವನ ಗುಮಾಸ್ತನ ರೂಪದಲ್ಲಿ ವರ್ತಕರ ಬಳಿಗೆ ಹೋಗಿ ಅದನ್ನೆಲ್ಲ ವಸೂಲು ಮಾಡು. ಅನಾಥ ಪಿಂಡಕನ ಧನದ ಬಿಂದಿಗೆಗಳು ಹದಿನೆಂಟು ಕೋಟಿಯೊಂದಿಗೆ ಸಮುದ್ರದಲ್ಲಿ ಮುಳುಗಿವೆ. ಅವುಗಳನ್ನೆಲ್ಲಾ ತೆಗೆದುಕೊಂಡು ಬಾ. ಮತ್ತೊಂದು ಕಡೆಯಲ್ಲಿ ಅನಾಥ ಪಿಂಡಕನು ಮರೆತು ಹೋದ ಅವನ ಹಿರಿಯರ ಆಸ್ತಿ ಹದಿನೆಂಟು ಕೋಟಿ ಬೆಲೆ ಬಾಳುವಷ್ಟಿದೆ. ಈ ಸಂಗತಿ ಯಾರಿಗೂ ತಿಳಿಯದು. ಆ ಆಸ್ತಿಯನ್ನು ಅನಾಥ ಪಿಂಡಕನಿಗೆ ಒಪ್ಪಿಸುವ ಕೆಲಸ ಮಾಡು. ಆಮೇಲೆ ಅವನ ಬಳಿಗೆ ಹೋಗಿ, ಕ್ಷಮಾಪಣೆ ಕೇಳಿಕೊಂಡು ಅವನ ಮನೆಗೆ



ಬಂದಿರಲು ಅನುಜ್ಞೆ ಕೇಳು. ಒಪ್ಪದಿರಲಾರ" ಎಂದು ಗ್ರಾಮದೇವತೆ ಆಲೋಚನೆ ಹೇಳಿದಳು.

ಕ್ಷುದ್ರದೇವತೆ ಆ ಪ್ರಕಾರವೇ ಅನಾಥ ಪಿಂಡಕನಿಗೆ ಸಾಲ ಕೊಡಬೇಕಾದವರನ್ನು ಕೇಳಿ ವಸೂಲು ಮಾಡಿದಳು. ಸಮುದ್ರದಲ್ಲಿ ಮುಳುಗಿದ ಧನದ ಬಿಂದಿಗೆಗಳನ್ನು ತಂದಳು. ಆಮೇಲೆ ಅನಾಥ ಪಿಂಡಕನ ಹಿರಿಯರ ಆಸ್ತಿಯನ್ನೂ ಅವನಿಗೆ ಸಿಗುವ ಹಾಗೆ ಮಾಡಿದಳು. ಆಮೇಲೆ ಅವನ ಹತ್ತಿರ ವಿನಯದಿಂದ, "ಅಯ್ಯಾ, ನನಗೆ ಈಗ ಬುದ್ಧಿ ಬಂತು. ಈ ಮೊದಲು ಮಾಡಿದ ತಪ್ಪನ್ನು ಕ್ಷಮಿಸಿ ಮತ್ತೆ ಮೊದಲಿನಂತೆ ನಾನು ನಿಮ್ಮ ಮನೆಯಲ್ಲಿರಲು ಅನುಮತಿ ಕೊಡಬೇಕು" ಎಂದು ಕೇಳಿಕೊಂಡಳು.

"ಬುದ್ಧ ಭಗವಾನನು ನನ್ನ ಮನೆಗೆ ಬರುವುದಕ್ಕೆ ತಾನೇ ನೀನು ನನ್ನ ಮೇಲೆ ಕೋಪಿಸಿಕೊಂಡಿದ್ದಿ? ನೀನು ಹೋಗಿ ಬುದ್ಧ ಭಗವಾನನನ್ನೇ ಕ್ಷಮೆ ಕೇಳಬೇಕು. ನನ್ನ ಹತ್ತಿರ ಅಲ್ಲ" ಎಂದನು ಅನಾಥ ಪಿಂಡಕ

ಅವಳು ಅನಾಥ ಪಿಂಡಕನ ಹಿಂದೆಯೇ ಬುದ್ಧ ಭಗವಾನನ ಬಳಿಗೆ ಹೋಗಿ, ಬುದ್ಧನ ಮುಂದೆ ನಡೆದ ಸಂಗತಿಯನ್ನೆಲ್ಲಾ ಹೇಳಿ ಕ್ಷಮೆ ಕೇಳಿದಳು:

"ದುಷ್ಕರ್ಮ ಮಾಡುವವನು, ತನ್ನ ಕರ್ಮ ಪರಿಪಾಕವಾಗುವ ವರೆಗೂ ತಾನು ಒಳ್ಳೆಯ ಕೆಲಸ ಮಾಡುವುದಾಗಿಯೇ ಅಂದುಕೊಳ್ಳುತ್ತಾನೆ. ಫಲಿತವನ್ನು ಅನುಭವಿಸಬೇಕಾಗಿ ಬಂದಾಗಲಷ್ಟೇ ಅವನಿಗೆ ನಿಜ ಸಂಗತಿ ಗೊತ್ತಾಗುತ್ತದೆ. ಅದೇ ವಿಧವಾಗಿ ಸತ್ಕರ್ಮ ಮಾಡುವವನು ಕೂಡಾ ತನ್ನ ಕರ್ಮ ಫಲಿತಕ್ಕೆ ಬರುವ ವರೆಗೂ ತಾನೇನೋ ಕೆಟ್ಟ ಕೆಲಸ ಮಾಡುವುದಾಗಿ ತಿಳಿದುಕೊಳ್ಳಲೂಬಹುದು. ಅವನಿಗೂ ಫಲ ಅನುಭವಕ್ಕೆ ಬಂದಾಗ ನಿಜ ಸಂಗತಿ ಗೊತ್ತಾಗುತ್ತದೆ. ಮೊದಲು ಹೇಳಿದ ಮಾತಿಗೆ ಈ ಕ್ಷುದ್ರದೇವತೆ ನಿದರ್ಶನ. ಇವಳು ತಾನು ಬಹಳ ಒಳ್ಳೆಯ ಕೆಲಸ ಮಾಡುವುದೆಂದೇ ನಂಬಿಕೊಂಡಿದ್ದಳು. ಎರಡನೆಯವನಿಗೆ ನಿದರ್ಶನ ಈ ಅನಾಥ ಪಿಂಡಕ. ಇವನು ತಾನು ದಾನ ಧರ್ಮ ಮಾಡುವುದೆಲ್ಲಾ ಕೆಟ್ಟ ಕೆಲಸಗಳು ಅಂದುಕೊಂಡು ಬಡತನ ಬಂದಾಗ ಚಿಂತಿಸಿಕೊಂಡಿದ್ದ. ಕರ್ಮ ಪರಿಪಾಕ ಆದ ಮೇಲೆಯೇ ನಿಮ್ಮಿಬ್ಬರಲ್ಲಿ ಯಾರದು ಸತ್ಕರ್ಮ, ಯಾರದು ದುಷ್ಕರ್ಮ ಎಂಬುದು ಹೊರಬಿದ್ದಿತು".

ಈ ಮಾತುಗಳನ್ನು ಕೇಳಿದ ಮೇಲೆ, ಕ್ಷುದ್ರದೇವತೆ ಒಳ್ಳೆಯ ಬುದ್ಧಿ ತಂದುಕೊಂಡಳು. ಬುದ್ಧನ ಮೇಲಿದ್ದ ಕೋಪವನ್ನು ಪೂರ್ತಿ ವಿಸರ್ಜಿಸಿ, ತನ್ನ ಮಕ್ಕಳ ಹಿಂಡಿನೊಂದಿಗೆ ಅನಾಥ ಪಿಂಡಕನ ಮನೆಯ ವಠಾರದ ನಾಲ್ಕನೇ ಪ್ರಾಕಾರದ ಮನೆಯಲ್ಲಿ ಎಂದಿನಂತೆ ವಾಸ ಮಾಡಿಕೊಂಡು ಬಂದಳು.





# ಹುಮಯೂನ್ ಮತ್ತು ಷೇರ್ ಷಹ

ಬಾಬರನ ಅನಂತರ ಆತನ ಕುಮಾರ ಹುಮಯೂನ್ ೧೫೩೦ನೇ ಇಸವಿಯಲ್ಲಿ ತನ್ನ ಇಪ್ಪತ್ತಮೂರನೇ ವಯಸ್ಸಿನಲ್ಲಿ, ಆಗ್ರಾರಾಜಧಾನಿಯಾಗಿರುವ ಢಿಲ್ಲಿಯಲ್ಲಿ ಮೊಗಲ್ ಸಾಮ್ರಾಜ್ಯದ ಸಿಂಹಾಸನವನ್ನು ಅಧಿಷ್ಠಿಸಿದನು. ಇವನು ಭೋಗಲಾಲಸನಾದುದರಿಂದ, ತನ್ನ ತಂದೆ ಸ್ಥಾಪಿಸಿದ ಸಾಮ್ರಾಜ್ಯವನ್ನು ಅಭಿವೃದ್ಧಿಗೊಳಿಸುವುದರಲ್ಲಿ ಆಸಕ್ತಿ ತೋರಿಸಲಿಲ್ಲ.

ಆ ಸಮಯದಲ್ಲಿ ಆಫ್ಘನ್ ಷೇರ್‌ಷಹನು ಭಾರತದೇಶದಲ್ಲಿ ಬಲಿಷ್ಠನಾದ ಪಾಲಕನಾಗಿ ಮೇಲೆ ಬರಲು ತೊಡಗಿದ್ದನು. ಬೀಹಾರದೊಳಗಿನ ಶಸಾರ ಜಾಗೀರುದಾರನ ಕುಮಾರನಾದ ಷೇರ್‌ಷಹನ ಅಸಲು ಹೆಸರು ಫರೀದ್. ಬಾಲ್ಯದಲ್ಲಿ ಅವನು ತನ್ನ ಸವತಿ ತಾಯಿಯಿಂದ ಅವಮಾನಿಸಲ್ಪಟ್ಟು, ಜುವೂನ್‌ಪೂರಿಗೆ ಓಡಿಹೋದವನು.





ಫರೀದ್ ಯುವಕನಾಗಿರುವಾಗ ಒಂದು ಸಾರಿ ಒಬ್ಬಂಟಿಗನಾಗಿ ಹುಲಿಯನ್ನು ಇದಿರಿಸಿ ಹೋರಾಡಿ ಹತ ಮಾಡಿದನು. ಆ ಯುವಕನು ಪ್ರದರ್ಶಿಸಿದ ಸಾಹಸವನ್ನು ನೋಡಿ, ಮುಗ್ಧನಾದ ಬೀಹಾರಿನ ಸುಲ್ತಾನ್ ಅವನಿಗೆ ಷೇರ್‌ಷಹ ಎಂಬ ಬಿರುದನ್ನು ಕೊಟ್ಟು ಗೌರವಿಸಿದನು. ಷೇರ್‌ಷಹನು ಸೈನಿಕ ವಿಧಾನದಲ್ಲಿಯೂ, ಉಪಾಯಕ್ಕೆ ಮೇಲೆ ಉಪಾಯ ಮಾಡುವುದರಲ್ಲಿಯೂ ಬಾಬರ್‌ನನ್ನು ಆದರ್ಶವಾಗಿಟ್ಟುಕೊಂಡು ಅಭ್ಯಾಸ ಮಾಡಿದನು.



ಬಗೆಬಗೆಯ ವ್ಯೂಹಗಳನ್ನು ಮಾಡಿ, ಬೇಗದಲ್ಲೇ
ಷೇರ್‌ಷಹನು ಬೀಹಾರಿನ ಪಾಲಕನಾದನು. ದಿನ
ದಿಂದ ದಿನಕ್ಕೆ ಹೆಚ್ಚಿಕೊಂಡು ಹೋಗುವ
ಷೇರ್‌ಷಹನ ಒತ್ತಡವನ್ನು ಹುಮಯೂನ್
ಇದಿರಿಸಲೇ ಬೇಕಾಯಿತು. ಅನೇಕ ಯುದ್ಧಗಳು
ನಡೆದುವು. ಹುಮಯೂನನಿಗೆ ಯುದ್ಧದ
ಮೇಲಿದ್ದ ಅನಾಸಕ್ತಿಯ ಕಾರಣದಿಂದ ಪ್ರತಿ
ಸಾರಿಯೂ ಅವನು ಸೋಲುಣ್ಣುತ್ತಾ ಬಂದನು.

ಒಂದು ಸಾರಿ ನಡೆದ ಯುದ್ಧದಲ್ಲಿ ಷೇರ್‌ಷಹನ
ಸೈನಿಕರಿಂದ ಹುಮಯೂನ್ ಮತ್ತು ಅವನ
ಸೈನಿಕರು ಗಂಗಾನದಿಗೆ ಹಾರಿ ತಪ್ಪಿಸಿಕೊಳ್ಳ
ಬೇಕಾಗಿ ಬಂತು. ನೂರಾರು ಮಂದಿ ಪ್ರವಾಹ
ದಲ್ಲಿ ಕೊಚ್ಚಿಹೋಗಲ್ಪಟ್ಟರು. ಹುಮಯೂನ್
ಕೂಡಾ ಒಳ್ಳೆಯ ಈಜುಗಾರನಲ್ಲದುದರಿಂದ
ಪ್ರಾಣಾಪಾಯದ ಸ್ಥಿತಿ ಏರ್ಪಟ್ಟಿತು.





ಪ್ರವಾಹದ ವೇಗಕ್ಕೆ ತಡೆದುಕೊಳ್ಳಲಾಗದೆ
ತತ್ತಳಿಸುತ್ತಿದ್ದ ಹುಮಯೂನನನ್ನು ನೀರು
ಹೊರುವವನೊಬ್ಬನು ನೋಡಿ, ತನ್ನ ಹತ್ತಿರವಿದ್ದ
ತೊಗಲಿನ ಚೀಲದೊಳಗೆ ತುಂಬಾ ಗಾಳಿ ತುಂಬಿಸಿ
ಅದನ್ನು ಗಂಗಾನದಿಯಲ್ಲಿ ಬಿಟ್ಟನು. ಅದನ್ನು
ಹಿಡಿದುಕೊಂಡು ಹುಮಯೂನ್ ತೀರವನ್ನು
ಸೇರಿದನು. ಆ ವಿಧವಾಗಿ ಒಬ್ಬ ರಾಜನ ಪ್ರಾಣ
ವನ್ನು ಸಾಮಾನ್ಯದವನೊಬ್ಬನು ಕಾಪಾಡಿದನು.



ಪ್ರಾಣವನ್ನು ಕಾಪಾಡಿದವನಿಗೆ ಕೃತಜ್ಞತೆ ಹೇಳುವ ರೀತಿಯಲ್ಲಿ ಹುಮಯೂನ್ ಅವನನ್ನು ಒಂದು ದಿನವಿಡೀ ತನ್ನ ಸಿಂಹಾಸನದಲ್ಲಿ ಕೂಡಿಸಿದನು. ಅವನು ತನ್ನ ಅಧಿಕಾರಕ್ಕೆ ಗುರುತಾಗಿ ಚರ್ಮದ ಸಂಚಿಯನ್ನು ಚೂರುಚೂರಾಗಿ ಹರಿದು, ಅವುಗಳನ್ನು ತನ್ನ ಜೀವಿತದಲ್ಲಿ ಮರೆಯಲಾಗದ ದಿನದ ಜ್ಞಾಪಕ ಚಿಹ್ನೆಯಾಗಿ ತತ ಮಿತ್ರರಿಗೆಲ್ಲಾ ಹಂಚಿಕೊಟ್ಟನು.

ತನ್ನ ಸಿಂಹಾಸನವನ್ನು ರಕ್ಷಿಸಿಕೊಳ್ಳಲಿಕ್ಕೆ ಹುಮಯೂನ್ ಮಾಡಿದ ಪ್ರಯತ್ನಗಳಾವುವೂ ಫಲಿಸಲಿಲ್ಲ. ಕಡೆಗೆ ಶತ್ರುಗಳ ದಾಳಿಗೆ ತಡೆಯಲಾರದೆ ಉಮರು ಕೋಟಿದ ಒಬ್ಬ ಹೈಂದವ ರಾಜನ ಮನೆಯಲ್ಲಿ ಹುಮಯೂನ್ ಅಡಗಿಕೊಳ್ಳಬೇಕಾಗಿ ಬಂತು. ಆ ಸಮಯದಲ್ಲಿ ಹುಮಯೂನನಿಗೆ ಅವನ ರಾಣಿ ಬೇಗಂ ಹಮೀದಾ ಬಾನುವಿನಲ್ಲಿ ಮಗನಾಗಿ ಅಕ್ಬರ್ ಜನಿಸಿದನು.





ದಿಲ್ಲಿಯನ್ನು ಆಕ್ರಮಿಸಿಕೊಂಡ ಷೇರ್‌ಷಹನು ಕ್ರಮವಾಗಿ ಉತ್ತರ ಭಾರತ ದೇಶವನ್ನೂ, ಪೂರ್ವ ಭಾರತ ಪ್ರಾಂತಗಳನ್ನೂ ತನ್ನ ಅಧಿಕಾರದೊಳಗೆ ತಂದುಕೊಂಡನು. ಅಧಿಕಾರವನ್ನು ಸುಸ್ಥಿರ ಮಾಡಿಕೊಂಡ ಮೇಲೆ, ಸೂರ್ ವಂಶಕ್ಕೆ ಸೇರಿದ ಷೇರ್‌ಷಹನು ತನ್ನ ಪರಿಪಾಲನೆಯ ವಿಧಾನದಲ್ಲಿ ಅನೇಕ ಸಂಸ್ಕರಣೆಗಳನ್ನು ತಂದು ಸಮರ್ಥನೆಂದೂ, ಆದರ್ಶ ಪರಿಪಾಲಕನೆಂದೂ ಹೆಸರುಗಳಿಸಿದನು.

ಷೇರ್‌ಖಾನನೆಂದು ತನ್ನ ಹೆಸರನ್ನು ಬದಲಾಯಿಸಿಕೊಂಡ ಷೇರ್‌ಷಹನು ರಾಜಪುತ್ರರೊಂದಿಗೆ ಅನೇಕ ಯುದ್ಧಗಳನ್ನು ಮಾಡಿದನು. ಕಾಲಿಂಜರ್ ಕೋಟೆಯ ಸಮೀಪದಲ್ಲಿ ಯುದ್ಧ ನಡೆಯುತ್ತಿದ್ದಾಗ ಒಂದು ಸಾರಿ ತುಪಾಕಿಯ ಸಿಡಿಮದ್ದಿನ ಸಂಗ್ರಹಕ್ಕೆ ಬೆಂಕಿ ಹತ್ತಿತು. ಆ ಸಮಯದಲ್ಲಿ ಸಮೀಪದಲ್ಲಿದ್ದ ಷೇರ್‌ಷಹನು ಗಾಯಗೊಂಡು ಆ ಮೇಲೆ ಮೃತನಾದನು.





ಷೇರ್‌ಷಹನ ಮರಣವೂ, ಆ ಮೇಲೆ ಉಂಟಾದ ಅಸ್ತವ್ಯಸ್ತ ಪರಿಸ್ಥಿತಿಯೂ ಕಾಂದಹಾರದಲ್ಲಿದ್ದ ಹುಮಯೂನನಿಗೆ ಗೊತ್ತಾಯಿತು. ಅದೇ ಸುಸಂಧಿ ಎಂದು ಭಾವಿಸಿ ಭಾರತದೇಶಕ್ಕೆ ಬಂದು, ಹದಿನೈದು ವರ್ಷಗಳ ಕೆಳಗೆ ಕಳೆದುಕೊಂಡಿದ್ದ ತನ್ನ ರಾಜ್ಯಾಧಿಕಾರವನ್ನು ಮರಳಿ ವಶಪಡಿಸಿಕೊಳ್ಳಲು ತಲೆ ಹಾಕಿದನು. ಆ ಕಾಲಕ್ಕೆ ಕ್ರಮಶಿಕ್ಷಣದಿಂದ ಸಂದರ್ಭಕ್ಕೆ ತಕ್ಕ ಹಾಗೆ ಹೇಗೆ ಪ್ರವರ್ತಿಸಬೇಕೆಂಬುದನ್ನು ಹುಮಯೂನ್ ಚೆನ್ನಾಗಿ ತಿಳಿದಿದ್ದನು.

೧೫೫೫ ನೇ ವರ್ಷದಲ್ಲಿ ಲಾಹೋರ್, ಆಗ್ರ, ಢಿಲ್ಲಿ ಪ್ರಾಂತಗಳನ್ನು ಸುಲಭವಾಗಿ ಆಕ್ರಮಿಸಿಕೊಂಡು ಹುಮಯೂನ್ ಮೊಗಲ್ ಪರಿಪಾಲನೆಯನ್ನು ಮತ್ತೆ ಸ್ಥಾಪಿಸಿದನು. ಆದರೆ ಅವನು ನೂತನ ರಾಜ್ಯ ವೈಭವವನ್ನು ಒಂದು ವರ್ಷ ಪೂರ್ತಿ ಕೂಡಾ ಅನುಭವಿಸಲಾರದೆ ಹೋದನು. ತನ್ನ ಭವನದಲ್ಲಿದ್ದ ಗ್ರಂಥಾಲಯಕ್ಕೆ ಹೋಗುವ ಮಾಳಿಗೆ ಮೆಟ್ಟಿಲಿನಿಂದ ಜಾರಿ ಬಿದ್ದು ೧೫೫೬ ನೇ ವರ್ಷದಲ್ಲಿ ಮೃತನಾದನು.





# ಕಣ್ಣುಕೆಟ್ಟವರು

ಒಂದಾನೊಂದು ಊರಿನಲ್ಲಿ ಮೂವರು ಸಹೋದರರಿದ್ದರು. ದೊಡ್ಡವರಾದ ಮೇಲೆ ಅವರು ಮೂವರೂ ತಮ್ಮ ತಮ್ಮ ಪಾಲಿನೊಂದಿಗೆ ಬೇರೆ ಬೇರೆ ಮನೆಗಳಲ್ಲಿ ವಾಸಮಾಡಿಕೊಂಡಿದ್ದರು. ಆ ಮೂವರು ಅಣ್ಣ ತಮ್ಮಂದಿರಿಗೂ ಅಪರಿಮಿತವಾದ ಚತ್ವಾರದ ದೃಷ್ಟಿ. ಎಷ್ಟರಮಟ್ಟಿಗೆ ಅವರ ಕಣ್ಣು ಕೆಟ್ಟಿತ್ತೆಂದರೆ, ಯಾವ ವಸ್ತುವಾದರೂ ಮೂಗಿನ ಹತ್ತಿರ ಇಟ್ಟ ಹೊರತು ಅವರಿಗೆ ಕಾಣುವುದಿಲ್ಲ.

ಆ ಮೂವರು ಒಡಹುಟ್ಟಿದವರೂ ಒಂದು ದಿನ ಸಾಯಂಕಾಲ ದೊಡ್ಡವನ ಮನೆಯಲ್ಲಿ ಸೇರಿಕೊಂಡು ಅದೂ ಇದೂ ಮಾತಾಡಿಕೊಂಡಿದ್ದರು. ಹಾಗೆ ಏನೇನೋ ಸಮಾಚಾರ ಹೇಳುತ್ತ ದೊಡ್ಡಣ್ಣನು ತಮ್ಮಂದಿರನ್ನು ನೋಡಿ, "ಅಂದ ಹಾಗೆ ಈ ನಡುವೆ ನನ್ನ ಕಣ್ಣು ಬಹಳ ಚೆನ್ನಾಗಿ ಬಿಟ್ಟಿದೆಯಪ್ಪ. ಅಷ್ಟು ದೂರದಲ್ಲಿರುವ ಸೊಳ್ಳೆಯನ್ನು ನೋಡಿದರೆ ಅದು ಹೆಣ್ಣೋ ಗಂಡೋ ಗೊತ್ತಾಗಿ ಬಿಡುತ್ತೆ, ಗೊತ್ತಾ ?" ಎಂದನು,

"ಸಾಕು ಬಿಡಣ್ಣ ನಿನ್ನ ಬಡಾಯಿ, ಒಂದು ವಾರದ ಕೆಳಗೆ ತಾನೇ ನೀನು ಕಾವಡಿ ಸುಬ್ಬನ ಮೇಲೆ ಢೀ ಕೊಟ್ಟಿದ್ದು ?" ಎಂದು ಮೂದಲಿಸಿ ನಗೆಯಾಡಿದನು ಎರಡನೇಯವನು.

"ಹಗಲಿನ ಮಾತು ಯಾಕೆ ಈಗ ? ರಾತ್ರಿಯಲ್ಲಿ ಕತ್ತಲೆಯಾದಷ್ಟೂ ನನ್ನ ದೃಷ್ಟಿ ಅದ್ಭುತವಾಗಿ ಪ್ರಕಾಶವಾಗಿದೆ. ಕೆಲವರಿಗೆ ರಾತ್ರಿ ದೃಷ್ಟಿ ಅಂತ ಕೇಳಿದ್ದೇನೆ. ಹಾಗೆ ನನ್ನ ದೃಷ್ಟಿ, ಬೆಕ್ಕಿನ ಕಣ್ಣಿನಷ್ಟು ಸೂಕ್ಷ್ಮವಾಗಿದೆ" ಎಂದನು ದೊಡ್ಡವನು.

"ಇದೆಲ್ಲಾ ಯಾಕೆ ಸುಮ್ಮನೆ ತಲೆ ಹರಟೆ ? ಯಾವುದನ್ನಾದರೂ ತಿಂದು ನೋಡಿದ ಹೊರತು ರುಚಿ ತಿಳಿಯದು. ಯಾರ ದೃಷ್ಟಿ ಹೇಗಿದೆ ಎಂದು ಪರೀಕ್ಷೆಗೆ ಇಟ್ಟು ಬಿಟ್ಟರೆ ಕ್ಷಣದಲ್ಲಿ ಸ್ಪಷ್ಟವಾಗಿ ಬಿಡುತ್ತೆ. ಏಕೆಂದರೆ ನಿನ್ನ ದೃಷ್ಟಿ ಚೆನ್ನಾಗಿದ್ದರೆ ನಮ್ಮದೂ ಚೆನ್ನಾಗಿದೆ ಎಂದೇ ಅರ್ಥ" ಎಂದನು ಅದುವರೆಗೆ ಸುಮ್ಮನಿದ್ದ ಮೂರನೇಯವನು.

"ಎಂಥಾ ಪರೀಕ್ಷೆ ನೀನು ಹೇಳೋದು ?" ಎಂದು ಎರಡನೆಯವನು ಕೇಳಿದನು.

"ಹೇಳುತ್ತೇನೆ ಕೇಳಿ. ನಮ್ಮ ಬೀದಿಯ ಇದಿರಲ್ಲಿ ಛತ್ರದ ಬಾಗಿಲು ಇದೆಯಷ್ಟೆ ? ಆ ಬಾಗಿಲಿನ ಮೇಲೆ ನಾಳೆ ಬೆಳಿಗ್ಗೆ ಧರ್ಮ ಶಾಸನದ ಶಿಲಾಫಲಕವನ್ನು




ಹಾಕಿಸುತ್ತಾರಂತೆ. ಆ ಫಲಕದ ಮೇಲೆ ಏನು ಬರೆದಿದೆ ಎಂಬುದನ್ನು ಓದುವುದೇ ನಮಗೆ ಪರೀಕ್ಷೆ. ಅದರ ಮೇಲಿನ ಅಕ್ಷರಗಳನ್ನು ಯಾರು ಹೆಚ್ಚಿಗೆ ಹತ್ತಿರದಲ್ಲಿ ನಿಂತು ಓದಿದರೆ ಅವರು ಸೋಲುತ್ತಾರೆ. ಸೋತು ಹೋದವನು ಉಳಿದ ಇಬ್ಬರಿಗೆ ಊಟ ಹಾಕಬೇಕು ಎಂದು ಪಂದ್ಯದ ಶರತ್ತು ಇಡೋಣ ? ಏನು ಹೇಳ್ತೀರಿ ?" ಎಂದನು ಮೂರನೆಯವನು.

ಇದಕ್ಕೆ ದೊಡ್ಡವರಿಬ್ಬರೂ ಸರಿ ಎಂದು ಒಪ್ಪಿದರು. ದೊಡ್ಡವನ ಮನೆಯಿಂದ ತಮ್ಮಂದಿರಿಬ್ಬರೂ ತಮ್ಮ ಮನೆಗೆ ಹೊರಟು ಹೋದ ಮೇಲೆ, ದೊಡ್ಡವನಿಗೆ ಯೋಚನೆ ಹಿಡಿಯಿತು. ಕಾರಣವೇನೆಂದರೆ ಆ ಶಾಸನವನ್ನು ಅವನಿಗೆ ಮೂಗಿನಿಂದ ಮುಟ್ಟಿಕೊಂಡೇ ಓದಬೇಕಾಗಿತ್ತು.

ಇದಕ್ಕೇನು ಮಾಡೋಣವೆಂದು ಬಹಳ ಹೊತ್ತು ತಲೆ ಕೆರೆದುಕೊಂಡ ಮೇಲೆ, ಅವನಿಗೆ ಒಂದು ದಿವ್ಯವಾದ ಉಪಾಯ ಹೊಳೆಯಿತು. ಆ ಛತ್ರದಲ್ಲಿ ಒಬ್ಬ ಗುಮಾಸ್ತನಿರುತ್ತಾನೆ. ಅವನನ್ನು ಕೇಳಿಬಿಟ್ಟರೆ ಆ ಧರ್ಮಛತ್ರದ ಶಾಸನದ ಶಿಲಾಫಲಕದ ಮೇಲೆ ಏನು ಬರೆದಿರುತ್ತದೆಂಬುದನ್ನು ಹೇಳಿಬಿಡುತ್ತಾನೆ. ಮತ್ತೇನು ! ಪಂದ್ಯ ಗೆದ್ದ ಹಾಗೆಯೇ. ಕೂಡಲೇ ಅವನು ಉತ್ಸಾಹದಿಂದೆದ್ದು ಛತ್ರಕ್ಕೆ ಹೋದನು.

ಅವನನ್ನು ನೋಡಿ ಛತ್ರದ ಗುಮಾಸ್ತ "ಏನು ಕೆಲಸದ ಮೇಲೆ ಬಂದಿರಿ ?" ಎಂದು ಕೇಳಿದನು.

"ಮತ್ತೇನಿಲ್ಲ, ನಾಳೆ ಇಲ್ಲಿ ಬಾಗಿಲ ಹತ್ತಿರ ಶಿಲಾಫಲಕವೊಂದು ಇಡುತ್ತಾರಂತಲ್ಲಾ ? ಅದರ ಮೇಲೆ ಏನು ಬರೆದಿರುತ್ತದೆ ?" ಎಂದನು ದೊಡ್ಡವನು,

"ಮತ್ತೇನಿಲ್ಲ. ಶ್ರೀರಾಮ ಕೃಪಾಕಟಾಕ್ಷ ಎಂದು ಬರೆಸಿದ್ದಾರೆ, ಅಷ್ಟೇ" ಎಂದನು.

ದೊಡ್ಡವನು, ಸಂತೋಷಪಡುತ್ತ, ಗುಮಾಸ್ತನ ಅಪ್ಪಣೆ ಪಡೆದು ತನ್ನ ಮನೆಗೆ ಹಿಂದಿರುಗಿದನು. ಆಗ ಛತ್ರದ ಬಾಗಿಲಿನ ಹತ್ತಿರವೇ ಅವನ ಎರಡನೇ ತಮ್ಮ ಇದಿರಾದನು. ಆದರೆ ಇಬ್ಬರೂ ಚತ್ವಾರದವರೇ ಆದುದರಿಂದ ಒಬ್ಬರನ್ನೊಬ್ಬರು ಗುರುತಿಸಿಕೊಳ್ಳಲಿಲ್ಲ.

ದೊಡ್ಡವನಿಗೆ ಬಂದ ಆಲೋಚನೆಯೇ ಎರಡನೆಯವನಿಗೂ ಬಂದಿತ್ತು. ಅವನು ಕೂಡಾ ಗುಮಾಸ್ತನ ಬಳಿಗೆ ಹೋಗಿ ದೊಡ್ಡವನು ಕೇಳಿದ ಹಾಗೆಯೇ ಶಿಲಾಫಲಕದ ಮೇಲೆ ಏನು ಬರೆದಿದ್ದಾರೆಂದು ಕೇಳಿದನು. ಪ್ರತಿಯೊಬ್ಬನೂ ಇದೇ ಸಂಗತಿ ಕೇಳುವುದನ್ನು ಕೇಳಿ ಗುಮಾಸ್ತನು ಆಶ್ಚರ್ಯದಿಂದ ದೊಡ್ಡವನಿಗೆ ಹೇಳಿದ ಉತ್ತರವನ್ನೇ ಇವನಿಗೂ ಹೇಳಿದನು.

ಎರಡನೆಯವನು ಅಷ್ಟಕ್ಕೆ ತೃಪ್ತನಾಗಿ ಹೋಗದೆ, "ಫಲಕಕ್ಕೆ ಬಣ್ಣ ಹಚ್ಚಿರುತ್ತದೆಯೇ ? ಅಕ್ಷರಗಳು ಯಾವ ಬಣ್ಣ ?" ಎಂದು ಕೂಡಾ ಕೇಳಿದನು.

"ಬೆಳ್ಳಗಿನ ಚಂದ್ರಕಾಂತ ಶಿಲೆಯಲ್ಲಿ ಚಿನ್ನದ ಬಣ್ಣದಲ್ಲಿ ಕೊರೆಯಲ್ಪಟ್ಟ ಅಕ್ಷರಗಳು" ಎಂದನು ಗುಮಾಸ್ತ.

ಎರಡನೆಯವನು ಹೊರಟು ಹೋದ ಸ್ವಲ್ಪ ಹೊತ್ತಿಗೆ, ಮೂರನೆಯವನು ಕೂಡಾ ಬಂದು ಗುಮಾಸ್ತನ ಹತ್ತಿರ ಮೊದಲನೆಯವನು ಕೇಳಿದಂತೆಯೇ ಕೇಳಿ, ಇವನೂ ಕೂಡ ಅದೇ ಉತ್ತರವನ್ನು ಪಡೆದನು.

"ಶ್ರೀರಾಮ ಕೃಪಾ ಕಟಾಕ್ಷ ಶಿಲಾ ಫಲಕ ಕೊಡಿಸಿದವರ ಹೆಸರು ಅದರಲ್ಲಿ ಬರೆಸಲಿಲ್ಲವೇನು?" ಎಂದು ಕೇಳಿದನು ಮೂರನೆಯವನು.

"ಚಿಕ್ಕ ಅಕ್ಷರಗಳಲ್ಲಿ ನರಸಿಂಹಗೌಡರು ಅಂತ ಬರೆದಿದ್ದಾರೆ. ಅದಕ್ಕೆ ಯಾವ ಬಣ್ಣದ ಅಕ್ಷರ ಅಂತ ಕೇಳುವಿರೇನು? ಕೆಂಪು ಬಣ್ಣ" ಎಂದನು ಗುಮಾಸ್ತ ನಸುನಗುತ್ತ.

ಹೀಗೆ ಮೂವರು ಅರೆಗುರುಡು ಅಣ್ಣ-ತಮ್ಮಂದಿರೂ ನಾನು ಗೆದ್ದೆ ತಾನು ಗೆದ್ದೆ ಎಂದುಕೊಳ್ಳುತ್ತಾ ಆ ರಾತ್ರಿ ನಿದ್ದೆ ಮಾಡಿದರು. ಬೆಳಗಾದ ಕೂಡಲೇ ದೊಡ್ಡವನ ಮನೆಗೆ ಉಳಿದವರಿಬ್ಬರೂ ಬಂದರು. ಛತ್ರದ ಶಿಲಾಫಲಕವನ್ನು ನೋಡುವುದಕ್ಕೆ ಹೋಗಲು ಮೂವರೂ ಹೊರಟರು. ಛತ್ರದ ಕಟ್ಟಡ ಅಷ್ಟು ದೂರದಲ್ಲಿರುವಾಗಲೇ ದೊಡ್ಡವನು ತಟ್ಟನೆ ನಿಂತು, "ಅದೋ, ಕಾಣುತ್ತದಲ್ಲ! ಇನ್ನೂ ಹತ್ತಿರ ಹೋಗಬೇಕಾದ ಆಗತ್ಯವಿಲ್ಲ. ಶಿಲಾಫಲಕದ ಮೇಲಿನ ಅಕ್ಷರಗಳು ಜಳಜಳ ಕಾಣುತ್ತಾ ಇವೆ. ಶ್ರೀರಾಮ ಕೃಪಾ ಕಟಾಕ್ಷ ಎಂದು ಬರೆದಿದೆ" ಎಂದನು.

ಅಣ್ಣ ಹೇಳಿದ ಮಾತು ಕೇಳಿ ತಮ್ಮಂದಿರಿಬ್ಬರೂ ಬೆರಗಾದರು. ಕ್ಷಣ ಕಾಲ ತಾವು ಸೋತೆವೆಂದು ಹೆದರಿದರು. ಅಷ್ಟರಲ್ಲಿ ಎರಡನೆಯವನು ಎಚ್ಚರಕ್ಕೆ ಬಂದು, "ಶಿಲಾ ಫಲಕದ ಬಣ್ಣ ಯಾವುದು? ಅಕ್ಷರಗಳ ರಂಗು ಎಂತಹದು?" ಎಂದು ಮರು ಪ್ರಶ್ನೆ ಮಾಡಿದನು. ಅದನ್ನು ಕೇಳಿ ಏನೂ ತೋರದೆ, ದೊಡ್ಡವನಿಗೆ ಥಕ್ಕನೆ ಗುಂಡಿಯಲ್ಲಿ ಬಿದ್ದ ಹಾಗಾಯಿತು.




"ರಂಗೋ? ನಿನಗೆ ರಂಗು ಕೂಡಾ ಕಾಣುತ್ತದೇನು?" ಎಂದು ಅವನು ಎರಡನೆಯವನನ್ನು ನೋಡಿ ಕೇಳಿದನು.

"ರಂಗು ಕಾಣುವುದಿಲ್ಲವೆಂದರೇನು? ಬೆಳ್ಳಗಿನ ಚಂದ್ರಕಾಂತ ಶಿಲಾ ಫಲಕದಲ್ಲಿ ಬಂಗಾರದ ಲೇಪ ಹಚ್ಚಿದ ಅಕ್ಷರಗಳು ಹೊಳೆಯುತ್ತವಲ್ಲ! ಕಾಣುವುದಿಲ್ಲವೇ?" ಎಂದು ಎರಡನೆಯವನು ಮಿಕ್ಕ ಇಬ್ಬರನ್ನೂ ಅಣಕಿಸುವ ರೀತಿಯಲ್ಲಿ ಕೇಳಿದನು.

"ನೀವಿಬ್ಬರೂ ಜಗಳಾಡಿಕೊಳ್ಳುವಿರೇಕೆ? ಆ ಫಲಕದ ಕೆಳ ಭಾಗದಲ್ಲಿರುವ ಚಿಕ್ಕ ಅಕ್ಷರಗಳನ್ನು ಓದಲಿಕ್ಕಾಗುವುದೋ ನೋಡಿ. ದೊಡ್ಡ ಅಕ್ಷರಗಳನ್ನು ಕುರುಡ ಕೂಡಾ ಓದುತ್ತಾನೆ" ಎಂದನು ಮೂರನೆಯವನು.

"ಫಲಕದಲ್ಲಿ ಚಿಕ್ಕ ಅಕ್ಷರಗಳು ಕೂಡಾ ಇವೆಯೇನು?" ಎಂದರು ದೊಡ್ಡವರಿಬ್ಬರೂ ಆಶ್ಚರ್ಯದಿಂದ.

“ಅದೋ ಕಾಣುತ್ತದೆ! ಕೆಂಪಗಿನ ಅಕ್ಷರಗಳಲ್ಲಿ ನರಸಿಂಹ ಗೌಡರು ಎಂದು ಸ್ಪಷ್ಟವಾಗಿ ಬರೆದಿದೆ. ಆ ಶಿಲಾಫಲಕ ಮಾಡಿಸಿದ್ದು ಅವರು ಅಂತ ಬರೆಯಲ್ಪಟ್ಟಿದೆ. ನೋಡಿದಿರಾ, ನಿಮ್ಮಿಬ್ಬರ ಕಣ್ಣಿಗಿಂತಲೂ ನನ್ನದೇ ವಾಸಿ” ಎಂದನು ಮೂರನೇಯವನು.

ದೊಡ್ಡವನು ತಾನು ಕೂಡಾ ಗೆದ್ದವನ ಸಾಲಿಗೆ ಸೇರುವ ಉದ್ದೇಶದಿಂದ, “ನಾವು ಮೂವರಲ್ಲಿ ನಿನ್ನ ದೃಷ್ಟಿ ಹೆಚ್ಚು ಮೇಲು ನಿಜ. ಅನಂತರ ಎರಡನೆಯದಾಗಿ ನನ್ನ ದೃಷ್ಟಿ ಹೆಚ್ಚಿನದು. ದೊಡ್ಡ ಅಕ್ಷರಗಳನ್ನು ಗುರುತಿಸಿದವನು ನಾನು ತಾನೇ? ನೀವಿಬ್ಬರೂಗಳು ಇನ್ನೂ ಹತ್ತಿರ ಹೋಗುತ್ತಿರುವಾಗ, ನಾನು ಹಿಂದೆಯೇ ನಿಂತುಬಿಟ್ಟೆನು. ಆದುದರಿಂದ ನಿನಗೂ ನನಗೂ ನಡುವಿನವನೇ ಊಟ ಹಾಕಬೇಕು” ಎಂದನು. ಅದನ್ನು ಕೇಳಿ ಎರಡನೆಯವನು “ಅಕ್ಷರಗಳ ಬಣ್ಣ, ಹಲಗೆಯ ಬಣ್ಣ ತಿಳಿಯದಿದ್ದವನು ನೋಡಿದೆನೆಂದರೆ ಹೇಗೆ ನಂಬುವುದು ?” ಎಂದು ಜೋರಾಗಿ ತಕರಾರು ತೆಗೆದನು.

ಸ್ವಲ್ಪ ಹೊತ್ತು ಮೂವರೂ ತಮ್ಮೊಳಗೆ ಘರ್ಷಣೆ ಮಾಡಿಕೊಂಡು, ಕಡೆಗೆ ಇದನ್ನು ಯಾರಾದರೂ ಬೇರೆಯವರ ತೀರ್ಪಿಗೆ ಬಿಡುವುದೇ ಒಳ್ಳೆಯದೆಂದು ಒಪ್ಪಿಕೊಂಡರು. ಆಗ ಛತ್ರದ ಗುಮಾಸ್ತನು ಆ ಕಡೆಗೇ ನಡೆಯುತ್ತಾ ಬಂದನು.

“ಅಯ್ಯಾ, ನೀವು ಯಾರೋ ತಿಳಿಯದು. ನಮಗೆ ಸ್ವಲ್ಪ ನ್ಯಾಯ ಹೇಳಿಬಿಡುವಿರಾ ? ಅಲ್ಲಿ ಕಾಣುವ ಆ ಶಿಲಾಫಲಕದ ಮೇಲೆ ಶ್ರೀರಾಮ ಕೃಪಾಕಟಾಕ್ಷ ಎಂದು ಬರೆದಿರುವುದು ಸುಳ್ಳೇ ?” ಎಂದು ದೊಡ್ಡವನು ಕೇಳಿದನು.

“ಸುಳ್ಳಲ್ಲ!” ಎಂದನು ಗುಮಾಸ್ತ.

“ಶಿಲಾಫಲಕ ಬೆಳ್ಳಗಿನ ಚಂದ್ರಕಾಂತ ಶಿಲೆ. ಅದರ ಮೇಲಿನ ಅಕ್ಷರ ಬಂಗಾರದ ಬಣ್ಣದ್ದು ಹೌದಷ್ಟೆ ?” ಎಂದನು ಎರಡನೆಯವನು.

“ಹೌದು ಹೌದು” ಎಂದನು ಗುಮಾಸ್ತ.

“ಚಿಕ್ಕ ಅಕ್ಷರಗಳಲ್ಲಿ ನರಸಿಂಹ ಗೌಡರು ಎಂದು ಬರೆದಿರುವುದು, ಅಕ್ಷರಗಳು ಕೆಂಪು ಬಣ್ಣದಲ್ಲಿರುವುದು, ನಿಜ ತಾನೇ ?” ಎಂದನು ಮೂರನೇಯವನು.

ಮತ್ತೆ ಅಣ್ಣ ತಮ್ಮಂದಿರು “ನನ್ನ ದೃಷ್ಟಿಯೇ ಮೇಲು” ನನ್ನದೇ ಹೆಚ್ಚು” ಎಂದು ತಕರಾರಿಗೆ ಬಿದ್ದು, ತಾವು ನೋಡಿದ ರೀತಿಯನ್ನು ವಿವರಿಸಲು ನೋಡುವಾಗ ಗುಮಾಸ್ತನು ತಡೆದು, “ನಿಮ್ಮದು ಯಾರ ದೃಷ್ಟಿ ಹೆಚ್ಚೋ, ಯಾರದು ಕಡಿಮೆಯೋ ಹೇಳುವಂತಿಲ್ಲ. ಮೂವರದು ಒಂದೇ ರೀತಿ ಎಂಬುದೇ ನಿಜ. ಏಕೆಂದರೆ ಛತ್ರದ ಬಾಗಿಲಲ್ಲಿ ಇನ್ನೂ ಆ ಫಲಕವನ್ನು ಇಡಲಿಲ್ಲ. ಅದಿನ್ನೂ ಛತ್ರದೊಳಗೇ ಮುಚ್ಚಿಕೊಂಡಿದೆ !” ಎಂದು ಹೇಳಿ ಮುಂದೆ ಹೋದನು.





# ವಿಲಕ್ಷಣ ಸಾಮಂತ

ಕಲಿಂಗ ಸಾಮ್ರಾಜ್ಯವನ್ನು ರಾಜ್ಯವರ್ಧನನೆಂಬ ಚಕ್ರವರ್ತಿ ಆಳಿಕೊಂಡಿರುವ ಕಾಲದಲ್ಲಿ, ಆತನ ಅಧೀನದಲ್ಲಿ ಕೆಲವು ಸಾಮಂತರಾಜ್ಯಗಳಿದ್ದುವು. ಅಂತಹ ಸಾಮಂತನಾಗಿ ವಿಂಧ್ಯಪರ್ವತಗಳಿಗೆ ಕೆಳಭಾಗದಲ್ಲಿ ವಪ್ರಗಿರಿ ರಾಜ್ಯವನ್ನು ಆನಂದನೆಂಬೊಬ್ಬ ರಾಜನು ಪಾಲಿಸಿಕೊಂಡಿದ್ದನು.

ಈ ಆನಂದರಾಜನ ಸ್ವಭಾವವು ಬಹಳ ವಿಚಿತ್ರವಾಗಿದ್ದಿತು. ಪರಿಪಾಲನೆಯ ವ್ಯವಹಾರಗಳಲ್ಲಿ ಎಂತಹ ಸಣ್ಣ ಸಮಸ್ಯೆ ಇದಿರಾದರೂ, ಶೀಘ್ರವಾಗಿ ಏನೋ ಒಂದು ಮಾಡಿ, ಆಮೇಲೆ ತೊಂದರೆಯಲ್ಲಿ ಸಿಕ್ಕಿಕೊಂಡು ಮತ್ತೇನೋ ಮಾಡುವನು.

ಒಂದುಸಾರಿ ಆನಂದ ರಾಜನಿಗೆ ಒಂದು ಆಲೋಚನೆ ಬಂತು. ರಾಜ್ಯಪಾಲನೆಯನ್ನು ಸುಗಮವಾಗಿ ಸಾಗಿಸುವುದಕ್ಕೆ ತನ್ನ ಮಂತ್ರಿಗೆ ಕೆಲಮಂದಿ ಸಲಹಾದಾರರನ್ನು ನಿಯಮಿಸುವುದು ಒಳ್ಳೆಯದೆಂದು ತೋರಿತು. ಅದನ್ನು ತನ್ನ ಪ್ರಧಾನ ಮಂತ್ರಿಗೆ ಹೇಳಿದನು. ರಾಜನ ಗುಣವನ್ನು ತಿಳಿದಿದ್ದ ಮಂತ್ರಿ ಅದಕ್ಕೆ ಒಪ್ಪಿಕೊಳ್ಳದಿದ್ದರೆ ಹೀಗೆ ತನ್ನ ಮಾತು ಕೇಳದುದರಿಂದಲೇ ತಪ್ಪಾಯಿತು ಎನ್ನುತ್ತಾನೆ ರಾಜ. ಅಂತಲೇ ಮಂತ್ರಿ ಸರಿ ಎಂದನು. ಇಬ್ಬರು ಸಲಹಾದಾರರನ್ನು ಮೊದಲು ನಿಯಮಿಸಿದರೂ, ಒಂದು ತಿಂಗಳೊಳಗೆ ಮಂತ್ರಿಗೆ ಸಹಾಯಕರಾಗಿ ಹನ್ನೊಂದು ಸಲಹಾದಾರರನ್ನು ಇಡಿಸಿದನು ಆ ರಾಜ. ಎರಡನೇ ತಿಂಗಳಲ್ಲಿ ಮಂತ್ರಿ ರಾಜನೊಂದಿಗೆ, "ಪ್ರಭೂ, ಇಷ್ಟು ಮಂದಿಗಳಲ್ಲಿ ಯಾರ ಸಲಹೆ ತೆಗೆದುಕೊಳ್ಳಬೇಕೋ ತಿಳಿಯುವುದಿಲ್ಲ. ಕೋಶಾಗಾರದ ಧನವೂ ಅವರ ಸಂಬಳಕ್ಕೇ ಖರ್ಚಾಗುತ್ತಲಿದೆ" ಎಂದನು.

ಕೂಡಲೇ ಆನಂದರಾಜನು ಆ ಸಲಹಾದಾರರನ್ನೆಲ್ಲ ಕರೆಯಿಸಿ, ಗೌರವ ವೇತನದ ಮೇಲೆ ಅವರನ್ನು ನಗರದೊಳಗಿನ ಬೇರೆಬೇರೆ ಪೇಟೆಗಳ ರಾಜ ಪ್ರತಿನಿಧಿಗಳಾಗಿ ನಿಯಮಿಸಿದನು. ಇದರಿಂದ ನಗರದೊಳಗೆ ಪ್ರಜೆಗಳಿಗೆ ಅಗತ್ಯವಿರುವ ವಿಷಯಗಳನ್ನು ಬೇಗನೆ ತಿಳಿದುಕೊಂಡು ಪರಿಷ್ಕಾರ ಮಾಡಬಹುದೆಂದು ರಾಜನ ಅಭಿಪ್ರಾಯ.

ಒಂದು ದಿನ ವರ್ತಕರ ಪೇಟೆಯ ಪ್ರತಿನಿಧಿಯಾಗಿದ್ದವನು ರಾಜನ ಬಳಿಗೆ ಬಂದು, ಆ ಪೇಟೆಯಲ್ಲಿ ದೇವಾಲಯವಿಲ್ಲವೆಂದೂ, ಅಲ್ಲಿ ಒಂದು

ಸಿ. ಎಂ. ಪಾರ್ವತಿ



ದೇವಾಲಯ ನಿರ್ಮಿಸಬೇಕೆಂದೂ ಬಿನ್ನವಿಸಿದನು. ರಾಜನು ಆ ವಿಷಯ ಮಂತ್ರಿಯೊಡನೆ ಹೇಳಿದಾಗ, ಮಂತ್ರಿ ದೇವಾಲಯ ಕಟ್ಟಲು ಬೇಕಾದ ಧನವು ಕೋಶಾಗಾರದಲ್ಲಿ ಇಲ್ಲವೆಂದು ಹೇಳಿದನು.

ರಾಜನು ಆ ಪೇಟೆಯ ಪ್ರತಿನಿಧಿಯೊಂದಿಗೆ, "ಆ ಪೇಟೆಯ ವರ್ತಕರು ರಾಜಬೀದಿಯಲ್ಲಿರುವ ದೇವಾಲಯಕ್ಕೆ ವಾರಕ್ಕೆ ಒಂದು ಸಾರಿ ಬಂದು ಪೂಜೆ ಮಾಡಿಕೊಳ್ಳಲು ಹೇಳು. ಅವರಿಗೆ ಒಂದು ದಿನವನ್ನು ಪ್ರತ್ಯೇಕಿಸಿಡುವಂತೆ ದೇವಾಲಯದ ಅರ್ಚಕನಿಗೆ ಸಮಾಚಾರ ಕಳುಹಿಸುತ್ತೇನೆ" ಎಂದನು.

ಆಮೇಲೆ ಒಂದು ವಾರ ತಿರುಗುವಷ್ಟರಲ್ಲಿ, ಕುಂಬಾರ, ಬಡಗಿ, ಕಮ್ಮಾರ ಮೊದಲಾದ ಬೇರೆ ಬೇರೆ ವೃತ್ತಿಯವರು ಆಯಾ ಪೇಟೆಯ ಪ್ರತಿನಿಧಿಗಳ ಮೂಲಕ ರಾಜಬೀದಿಯ ದೇವಾಲಯದಲ್ಲಿ ತಮಗೆ ಕೂಡಾ ಒಂದು ದಿನವನ್ನು ಪೂಜೆಗೆ ಪ್ರತ್ಯೇಕಿಸಬೇಕೆಂದು ಕೇಳಿಕೊಂಡರು. ಒಂದು ವಾರಕ್ಕೆ ಏಳು ದಿನಗಳಷ್ಟೇ ಇರುವುದರಿಂದ ಅಷ್ಟೆಲ್ಲಾ ವೃತ್ತಿಯವರಿಗೆ ಒಂದೊಂದು ದಿನ ಪ್ರತ್ಯೇಕಿಸುವ ಮಾತು ಸಾಧ್ಯವಿಲ್ಲವೆಂದು ಮಂತ್ರಿ ಹೇಳಿದನು.

ಆದರೆ ರಾಜನು ಮಂತ್ರಿಯನ್ನು ಏನೂ ತಿಳಿಯದ ಅಮಾಯಕನ ಲೆಕ್ಕದಲ್ಲಿ ನೋಡಿ, "ಪ್ರಜೆಗಳ ಕೋರಿಕೆಯನ್ನು ಹೀಗೆ ಅಲ್ಲಗಳೆಯುವುದು ಪರಿಪಾಲಕರಿಗೆ ಸರಿಯಲ್ಲ" ಎಂದನು ಕೋಪದಿಂದ.

"ನಿಜವೇ ಪ್ರಭೂ. ಆದರೆ ವಾರಕ್ಕೆ ಏಳು ದಿನಗಳು ತಾನೇ ಇವೆ?" ಎಂದನು ಮಂತ್ರಿ.

"ಆ ಸಂಗತಿ ಗೊತ್ತಿಲ್ಲವೆ? ಇಂದಿನಿಂದ ವಾರಕ್ಕೆ ಹತ್ತು ದಿನಗಳು!" ಎಂದನು ಆನಂದರಾಜ.

"ಅಪ್ಪಣೆ, ಇದುವರೆಗೆ ಇರುವ ಏಳು ದಿನಗಳಿಗೆ ಮಾತ್ರವೇ ಹೆಸರುಗಳಿವೆ, ಉಳಿದ ಮೂರು ದಿನಗಳ ಹೆಸರು ಹೇಗೆ?" ಎಂದನು ಮಂತ್ರಿ.

"ಇದೊಂದು ದೊಡ್ಡ ಸಮಸ್ಯೆಯಲ್ಲ, ಒಂದು ದಿನಕ್ಕೆ ಚಕ್ರವರ್ತಿಯ ಹೆಸರಿಡೋಣ, ಮತ್ತೊಂದಕ್ಕೆ ನನ್ನ ಹೆಸರಾಯಿತು. ಮೂರನೇದಕ್ಕೆ ನಿಮ್ಮ ಹೆಸರಿಟ್ಟು ಬಿಡಿ. ಸರಿಯಾಯಿತಷ್ಟೆ?" ಎಂದನು ವಿಲಕ್ಷಣ ಗುಣದ ಆ ರಾಜ.

ಇನ್ನು ಮೇಲೆ ವಾರಕ್ಕೆ ಹತ್ತು ದಿನಗಳೆಂಬ ವಾರ್ತೆ ನಗರದಲ್ಲೆಲ್ಲಾ ಹರಡಿತು. ಅದನ್ನು ಕೇಳಿ ನಗರದಲ್ಲಿ ಕುಬೇರನಂತಹವನೆಂದು ಹೆಸರು ಪಡೆದ ರತ್ನಶೆಟ್ಟಿ ಎಂಬವನು ಆನಂದರಾಜನ ಬಳಿಗೆ ಬಂದು, "ಪ್ರಭೂ, ಧರ್ಮಕಾರ್ಯಗಳಿಗೆ ತಮ್ಮ ಕೋಶಾಗಾರಕ್ಕೆ ಧನದ ಕೊರತೆ ಇರುವುದಾಗಿ ಕೇಳಿದೆ, ತಮಗೆ ಲಕ್ಷ ವರಹಗಳನ್ನು ಸಮರ್ಪಿಸಿ ಕೊಳ್ಳುತ್ತೇನೆ. ವಾರಕ್ಕೆ ಹನ್ನೊಂದು ದಿನಗಳನ್ನು ಮಾಡಿ, ಅದಕ್ಕೆ ನನ್ನ ಹೆಸರನ್ನು ಇಡಬೇಕೆಂದು ಪ್ರಾರ್ಥನೆ" ಎಂದನು ಕೈ ಮುಗಿದು.

ಅದನ್ನು ಕೇಳಿ ರಾಜನಿಗೆ ಬಹಳ ಸಂತೋಷವಾಯಿತು. ಕೂಡಲೇ ವಾರಕ್ಕೆ ಹನ್ನೊಂದು ದಿನ

ಗಳೆಂದು ತನ್ನ ರಾಜ್ಯದಲ್ಲೆಲ್ಲಾ ಪ್ರಕಟಿಸಿ ಹನ್ನೊಂದನೇ ದಿನಕ್ಕೆ ರತ್ನಶೆಟ್ಟಿಯ ಹೆಸರನ್ನೇ ಇಟ್ಟನು. ಇದು ನಗರದೊಳಗಿನವರಿಗೆಲ್ಲಾ ದೊಡ್ಡ ನಗೆ ಪಾಟಲಿನ ವ್ಯವಹಾರದಂತೆ ತೋರಿತು. ಸುತ್ತು ಮುತ್ತಲಿನ ಸಾಮಂತ ರಾಜರಿಗೆ ಈ ಸಮಾಚಾರ ಗೊತ್ತಾಗಿ, ಈ ಪಿಡುಗು ತಮ್ಮ ರಾಜ್ಯಕ್ಕೂ ಹರಡಬಹುದೆನಿಸಿ, ಈ ನೆವನದಿಂದ ವಜ್ರಗಿರಿ ರಾಜ್ಯವನ್ನು ಕಬಳಿಸಲು ತಂತ್ರಮಾಡಲು ತೊಡಗಿದರು.

ಈ ವಿಲಕ್ಷಣ ವ್ಯವಹಾರಗಳೆಲ್ಲಾ ಗೂಢಚಾರರ ಮೂಲಕವಾಗಿ ಚಕ್ರವರ್ತಿಯಾದ ರಾಜ್ಯವರ್ಧನನಿಗೆ ತಿಳಿಯಿತು. ತನ್ನ ಸಾಮಂತರೊಳಗಿನ ಕಚ್ಚಾಟವು ಸಾಮ್ರಾಜ್ಯಕ್ಕೇ ಹಾನಿ ತರುವಂತಹುದೆಂದು ತಿಳಿದು, ಎಲ್ಲ ಸಾಮಂತರೂ ತನ್ನ ಬಳಿಗೆ ಬರತಕ್ಕದೆಂದು ಆಜ್ಞೆ ಕಳುಹಿಸಿದನು.

ರಾಜ್ಯವರ್ಧನನು ತುಂಬಿದ ಸಭೆಯಲ್ಲಿ ವಜ್ರಗಿರಿಯ ಆನಂದ ರಾಜನನ್ನು ಪರಿಪಾಲನೆಯಲ್ಲಿ ಎಲ್ಲರಿಗಿಂತ ಹೆಚ್ಚಿನ ದಕ್ಷನೆಂದು ಮೆಚ್ಚಿ ಹೊಗಳಿ, "ಇಂತಹ ಅನುಭವಶಾಲಿಯಾದ ಮಹಾ ಮೇಧಸ್ಸುಳ್ಳವನು ನನಗೆ ಸಲಹಾದಾರನಾಗಿದ್ದರೆ ಸಾಮ್ರಾಜ್ಯಕ್ಕೆ ತುಂಬಾ ಮೇಲುಂಟಾಗುತ್ತದೆ. ಅಂತಲೇ ಆತನನ್ನು ನನ್ನ ಸಲಹಾದಾರನನ್ನಾಗಿ ನಿಯಮಿಸಿಕೊಳ್ಳುತ್ತೇನೆ" ಎಂದನು.

ರಾಜ್ಯವರ್ಧನ ಚಕ್ರವರ್ತಿಯ ಮಾತು ಕೇಳಿ ಆನಂದರಾಜನ ಹೊರತು ಉಳಿದವರೆಲ್ಲಾ ದಂಗು ಬಡೆದವರಂತಾದರು. ರಾಜ್ಯವರ್ಧನನು ಆ ಕೂಡಲೇ ಆನಂದ ರಾಜನ ಕುಮಾರನಾದ ಸತ್ಯದೇವನನ್ನು ವಜ್ರಗಿರಿಯ ರಾಜನೆಂದೂ ಪ್ರಕಟಿಸಿದನು.

ಸಭೆ ಮುಗಿದು ಎಲ್ಲರೂ ಹೊರಟುಹೋದರು. ಸತ್ಯದೇವನು ಹೊರಟುಹೋಗಲು ಅಪ್ಪಣೆ ಪಡೆದು ನಿಂತಾಗ, ರಾಜ್ಯವರ್ಧನನು ಅವನೊಂದಿಗೆ, "ತಂದೆಗೆ ಬದಲು ನಿನ್ನನ್ನು ರಾಜನನ್ನಾಗಿ ಮಾಡಿದುದರ ಕಾರಣವು ನಿನಗೆ ಗೊತ್ತಾಗಿರಬೇಕು. ವಿಲಕ್ಷಣ ಬುದ್ಧಿಯ ಸಾಮಂತ ರಾಜನಾದ ನಿನ್ನ ತಂದೆಯ ಸಲಹೆಯಿಂದ ನನಗೇನೂ ಆಗಬೇಕಾಗಿಲ್ಲ. ಅವನ ಸಲಹೆಗಳ ಬಾಧೆ ನಿನ್ನನ್ನು ಕಾಡಬಾರದೆಂದೇ ಆತನನ್ನು ನನ್ನ ಆಸ್ಥಾನದಲ್ಲಿ ಇಟ್ಟುಕೊಂಡಿದ್ದೇನೆ. ನಿನ್ನ ಪರಿಪಾಲನೆ ಚೆನ್ನಾಗಿರುವಂತೆ ರಕ್ಷಣೆ ಕೊಡುವುದೇ ನನ್ನ ಉದ್ದೇಶವಲ್ಲದೆ, ತಂದೆಯಿಂದ ನಿನ್ನನ್ನು ದೂರ ಮಾಡುವುದಲ್ಲ" ಎಂದನು.

ಸತ್ಯದೇವನು ರಾಜ್ಯವರ್ಧನ ಚಕ್ರವರ್ತಿಗೆ ತನ್ನ ಕೃತಜ್ಞತೆ ಹೇಳಿ ವಜ್ರಗಿರಿಗೆ ಹಿಂದಿರುಗಿ ಹೋಗಿ, ಅನುಭವಜ್ಞನಾದ ಮಂತ್ರಿಯ ಸಹಾಯದಿಂದ ರಾಜ್ಯಪಾಲನೆಮಾಡುತ್ತ, ಬೇಗ ದಲ್ಲೇ ಸಮರ್ಥನಾದ ರಾಜನೆನಿಸಿದನು.





# ಮಂದಬುದ್ಧಿ

**ಒಂ**ದು ಊರಿನಲ್ಲಿ ಬಂಗ್ಯಾರಯ್ಯನೆಂಬ ದೊಡ್ಡ ಆಸ್ತಿವಂತನಿದ್ದನು. ಅತನಿಗೆ ಕೆಲಸಗಾರರಿಲ್ಲದೆ ಒಂದು ಕ್ಷಣ ಕೂಡಾ ಸಾಗುತ್ತಿದ್ದಿಲ್ಲ. ಕಾರಣವೇನೆಂದರೆ ಆತನದು ಭಾರೀ ದೊಡ್ಡ ದಪ್ಪಶರೀರ, ಕೈಯಿಂದ ಏನಾದರೂ ಜಾರಿ ಕೆಳಗೆ ಬಿದ್ದರೆ, ಬಗ್ಗಿ ಅದನ್ನು ಎತ್ತಿ ಕೊಳ್ಳಲು ಭಾರೀ ಶ್ರಮಪಡುತ್ತಾನೆ. ದೊಡ್ಡ ದೊಡ್ಡ ಉಸಿರುಗಳೆದ್ದು ಸಾಕೋ ಸಾಕಾಗುತ್ತದೆ. ಪೆಟ್ಟಿಗೆ ತಾಂಬಾ ಹಣವಿರುವವನಾದುದರಿಂದ ತನ್ನೊಂದಿಗೆ ಯಾವಾಗಲೂ ಆಳನ್ನು ಇಟ್ಟು ಕೊಂಡಿರುತ್ತಾನೆ, ದೊಡ್ಡ ಶರೀರದೊಂದಿಗೆ ಹಣವೂ ಧಂಡಿಯಾಗಿರುವುದರಿಂದ ಅವನಿಗೆ ಕೋಪವೂ ಬಹಳ ಹೆಚ್ಚು. ಆದುದರಿಂದ ಯಾವ ಆಳೂ ಅವನ ಹತ್ತಿರ ಒಂದು ತಿಂಗಳಿಗಿಂತ ಹೆಚ್ಚು ಕಾಲ ನಿಲ್ಲುವುದಿಲ್ಲ, ಆ ಒಂದು ತಿಂಗಳಾದರೂ ಏಕೆ ಇರುವರೆಂದರೆ, ಸಂಬಳಕ್ಕಾಗಿಯೇ ! ಮೊದಲನೇ ತಿಂಗಳ ಸಂಬಳ ಕೈಗೆ ಸಿಕ್ಕಿದ ಕೂಡಲೇ ಕೆಲಸ ಬಿಟ್ಟು ಹೋಗಿ ಬಿಡುತ್ತಾನೆ.

ಇದರಿಂದ ಬಂಗಾರಯ್ಯ ತುಂಬಾ ಬೇಸತ್ತು, ಯಾರಾದರೂ ತನ್ನ ಬಳಿಯಲ್ಲಿ ಆರು ತಿಂಗಳ ವರೆಗೆ ಕೆಲಸ ತಪ್ಪಿಸದೆ ಸರಿಯಾಗಿದ್ದರಾದರೆ ಮಾತ್ರವೇ ಆರು ತಿಂಗಳ ಸಂಬಳವನ್ನು ಒಂದೇಸಾರಿ ಕೊಡುತ್ತೇನೆಂದನು. ಹಾಗೆ ಹೇಳಿದ ಮೇಲೆ ಆತನಿಗೆ ಕೆಲಸದಾಳು ಸಿಗುವುದು ಇನ್ನಷ್ಟು ಕಷ್ಟವಾಯಿತು. ಪರಿಸ್ಥಿತಿ ಅಷ್ಟು ಬಿಕ್ಕಟ್ಟಿಗೆ ಬಂದಾಗ ಒಬ್ಬ ಆಳು ಬಂದು ಸೇರಿದ. ಅವನ ಹೆಸರು ಮಂದ ಬುದ್ಧಿಯಂತೆ.

ಹೆಸರು ಹೇಗಿದ್ದರೇನೆಂದುಕೊಂಡು ಬಂಗಾರಯ್ಯ ಅವನನ್ನು ಕೆಲಸಕ್ಕೆ ಇಟ್ಟುಕೊಂಡನು. ಮಂದಬುದ್ಧಿಗೆ ತನ್ನವರೆನ್ನಲು ಯಾರೂ ಇರಲಿಲ್ಲ. ಅವನ ತಲೆಯೊಳಗೆ ತಿಳುವಳಿಕೆ ಎಂಬುದಕ್ಕೆ ಆಸ್ಪದವೂ ಇರಲಿಲ್ಲ. ಏನು ಮಾಡಿದರೂ ಅವನಿಗೆ ಕೋಪ ಕೂಡ ಬರುವುದಿಲ್ಲ. ಬಂಗಾರಯ್ಯ ಏನು ಕೆಲಸ ಹೇಳಿದರೂ ಅಕ್ಷರ ತಪ್ಪದಂತೆ ಹೇಳಿದ ಹಾಗೆಯೇ ಮಾಡುತ್ತಾನೆ. ಬಹಳ ಕಾಲದ ಮೇಲೆ ಬೊಜ್ಜು ಮೈಯ ಬಂಗಾರಪ್ಪನಿಗೆ ಹೇಳಿ ಮಾಡಿಸಿದ ಕೆಲಸದಾಳೇ ಸಿಕ್ಕಿದ್ದ.

ಒಂದು ದಿನ ರಾತ್ರಿ ಬಂಗಾರಯ್ಯ ಮಲಗುವ ಕೋಣೆಯಲ್ಲಿ ಮಲಗಿಕೊಂಡಿರುವಾಗ, ಅವನಿಗೆ ನಡು ಮನೆಯಲ್ಲಿದ್ದ ದೀಪವನ್ನು ಆರಿಸಲಿಲ್ಲವೇನೋ

ಎಂಬ ಸಂಶಯ ಬಂತು. ಅವನು ಮಲಗಿದಲ್ಲೇ ಮಂದಬುದ್ಧಿಯನ್ನು ಕರೆದು, ನಡುಮನೆಯ ದೀಪ ವನ್ನು ಆರಿಸಿಬಿಡುವಂತೆ ಹೇಳಿದನು. ಅಷ್ಟರ ವರೆಗೂ ಬೆಳಗಿಕೊಂಡಿದ್ದ ಆ ದೀಪವು ಮಂದಬುದ್ಧಿಯ ದುರದೃಷ್ಟದಿಂದಲೋ ಏನೋ, ಅವನು ಆರಿಸುವುದ ರೊಳಗೆ ಗಾಳಿಯಿಂದಲೇ ಆರಿಹೋಯಿತು.

ಬಂಗಾರಯ್ಯ ತನಗೆ ದೀಪ ಆರಿಸುವ ಕೆಲಸ ಹೇಳಿದ್ದಾರೆ. ಅವರ ಮಾತು ನಡೆಸದಿದ್ದರೆ ಹೇಗೆ? ಹೀಗಂದುಕೊಂಡು ಮಂದಬುದ್ಧಿ ಪಕ್ಕದ ಮನೆಗೆ ಹೋಗಿ ಬೆಂಕಿ ಪೆಟ್ಟಿಗೆಯನ್ನು ಕೇಳಿದನು.

"ನಿಮ್ಮನೆಯಲ್ಲಿ ಬೆಂಕಿ ಪೆಟ್ಟಿಗೆ ಇಲ್ಲವೇನು?" ಎಂದು ನೆರೆಮನೆಯವನು ಕೇಳಿದನು.

"ಇದೆ. ಕತ್ತಲೆಯಲ್ಲಿ ಎಲ್ಲಿದೆಯೋ ಕಾಣುವುದಿಲ್ಲ" ಎಂದನು ಮಂದಬುದ್ಧಿ.



"ನಮ್ಮಲ್ಲಿರುವುದು ಒಂದೇ ಒಂದು ಬೆಂಕಿ ಪೆಟ್ಟಿಗೆ, ರಾತ್ರಿಯಲ್ಲೆಲ್ಲಾದರೂ ಅಗತ್ಯ ಬಿದ್ದರೆ ಹೇಗೆ? ನಿನ್ನೊಡನೆ ನಾನೂ ಬರುತ್ತೇನೆ" ಎಂದು ಪಕ್ಕದ ಮನೆಯವನು ಮಂದಬುದ್ಧಿಯ ಕೈಗೆ ಬೆಂಕಿ ಪೆಟ್ಟಿಗೆ ಕೊಟ್ಟು, ಅವನ ಹಿಂದೆಯೇ ಬಂಗಾರಯ್ಯನ ಮನೆಗೆ ಬಂದನು. ಮಂದಬುದ್ಧಿ ದೀಪವನ್ನು ಬೆಳಗಿಸಿ, ಕೂಡಲೇ ಆರಿಸಿ ಬೆಂಕಿ ಪೆಟ್ಟಿಗೆಯನ್ನು ನೆರೆ ಮನೆಯವನಿಗೆ ಕೊಟ್ಟು, "ನನ್ನ ಕೆಲಸ ಆಯಿತು. ನೀವು ಹೋಗಿ" ಎಂದನು.

ನೆರೆಮನೆಯವನು ಆಶ್ಚರ್ಯ ಪಡುತ್ತ, "ಹಚ್ಚಿ ಆರಿಸುವುದಕ್ಕೆ ಬೆಂಕಿ ಪೆಟ್ಟಿಗೆ ಏತಕ್ಕೆ?" ಎಂದು ಕೇಳಿದನು. "ನನ್ನ ಯಜಮಾನರು ನನಗೆ ದೀಪ ಆರಿಸುವ ಕೆಲಸ ಹೇಳಿದರು. ನಾನು ಆರಿಸುವುದರೊಳಗೆ ಅದು ಆರಿಹೋಯಿತು. ಅದಕ್ಕೇ ಮತ್ತೆ ದೀಪ ಹಚ್ಚಿ ಆರಿಸಿದೆ" ಎಂದ ಮಂದಬುದ್ಧಿ.

ಆ ಉತ್ತರವನ್ನು ಕೇಳಿ ನೆರೆಮನೆಯವನು ನಗುತ್ತ, ಬಂಗಾರಯ್ಯನ ಬಳಿಗೆ ಹೋಗಿ, ಅವನ ಆಳಿನ ಸಮಾಚಾರವನ್ನು ಹೇಳಿ, "ನಿಮ್ಮ ಕೆಲಸದ ಆಳು ಹೇಳಿದ್ದು ಮಾಡುತ್ತಾನೆಯೇ ಹೊರತು, ಸ್ವಂತವಾಗಿ ಆಲೋಚನೆ ಮಾಡಲು ತಿಳಿಯದ ಪರಮ ಮೂಢ. ಇವನಿಗೆ ತಿಳುವಳಿಕೆಯನ್ನು ಕಲಿಸದೆ ಹೋದರೆ ನಿಮಗೆ ಬಹಳ ದೊಡ್ಡ ಅಪಾಯವೇ ಇವನಿಂದ ಆದೀತು!" ಎಂದು ಪಂಚತಂತ್ರದ ಎರಡು ಕಥೆಗಳನ್ನು ಹೇಳಿದನು.

ಅದನ್ನು ಕೇಳಿದ ಕೂಡಲೇ ಬಂಗಾರಯ್ಯನಿಗೆ ಭಯವಾಯಿತು. ಆದರೆ ಮಂದಬುದ್ಧಿಯಂತಹ ವಿನಯ ಗುಣ ತುಂಬಿದ ಆಳನ್ನು ಬಿಟ್ಟು ಬಿಡಲಿಕ್ಕೂ ಅವನಿಗೆ ಇಷ್ಟವಿರಲಿಲ್ಲ. ಅವನು ಚೆನ್ನಾಗಿ ಆಲೋಚನೆ ಮಾಡಿ, ಮರು ದಿನ ಶಾಲೆಯ ಉಪಾಧ್ಯಾಯರನ್ನು ಕರೆದು, ದಿನಾ ಬಂದು ಮಂದಬುದ್ಧಿಗೆ ಪಾಠ ಹೇಳಿ ಕೊಡುವಂತೆ ಅವರನ್ನು ಒಪ್ಪಿಸಿದನು.

ಉಪಾಧ್ಯಾಯರು ಬಹಳ ಒಳ್ಳೆಯವರು, ಅವರು ದಿನಾ ಬಂದು ಮಂದಬುದ್ಧಿಗೆ ಶ್ರದ್ಧೆಯಿಂದ ಓದು ಬರೆಹಗಳನ್ನು ಕಲಿಸಿದರು. ಬುದ್ಧಿ ಮಾತುಗಳನ್ನು

ಬೋಧಿಸಿದರು. ಅವನಿಗೆ ಯಾವ ವಿಷಯವನ್ನು ಹೇಗೆ ಹೇಳಿದರೆ ಅರ್ಥವಾಗುತ್ತದೆಂಬುದನ್ನು ಗಮನಿಸಿ, ಆ ರೀತಿಯಾಗಿ ಬೋಧಿಸುತ್ತಿದ್ದರು. ಒಂದು ತಿಂಗಳೊಳಗೇ ಮಂದ ಬುದ್ಧಿಯ ಬುದ್ಧಿ ಹೇಳಿದ ಮಾತನ್ನು ಆಲೋಚನೆ ಮಾಡಿಕೊಳ್ಳು ವಷ್ಟು ವಿಕಸನವಾಯಿತು.

ಹೀಗೆ ಮಂದ ಬುದ್ಧಿಯಲ್ಲಿ ಬಂದ ಮಾರ್ಪಾಡನ್ನು ನೋಡಿ ಉಪಾಧ್ಯಾಯರು ಸಂತೋಷಪಟ್ಟು, ಬಂಗಾರಯ್ಯನ ಬಳಿಗೆ ಬಂದು, "ನೋಡಿದಿರಾ. ಈಗ ನಿಮ್ಮ ಆಳು ಮಂದಬುದ್ಧಿ ಗಟ್ಟಿಗನಾದನು. ಆವನಿಗೆ ಕಲಿಸುವ ರೀತಿಯಲ್ಲಿ ಕಲಿಸುವವರಾರೂ ಇಲ್ಲದ್ದರಿಂದಲೇ ಕೇವಲ ಪೊದ್ದು ಬುದ್ಧಿಯವನಾದ. ನಿಜಕ್ಕೂ ಅವನು ಬಹಳ ಚುರುಕು ಬುದ್ಧಿಯವನು. ಈಗ ಒಳ್ಳೆಯ ತಿಳುವಳಿಕೆಯುವನೂ ಆಗಿದ್ದಾನೆ" ಎಂದು ಮಂದಬುದ್ಧಿಯನ್ನು ಮೆಚ್ಚಿ ಹೇಳಿದನು.

ಬಂಗಾರಯ್ಯ ಮಂದಬುದ್ಧಿಯ ತಿಳುವಳಿಕೆಯನ್ನು ಕೆಲವು ಪ್ರಶ್ನೆಗಳಿಂದ ಪರೀಕ್ಷಿಸಿ, ಉಪಾಧ್ಯಾಯರ ಮಾತು ನಿಜವೇ ಎಂದು ಮನವರಿಕೆ ಮಾಡಿಕೊಂಡನು. ಬಳಿಕ ಉಪಾಧ್ಯಾಯರಿಗೆ ಬಹುಮಾನ ಕೊಟ್ಟು ಸಂತೋಷಪಡಿಸಿ ಕಳುಹಿಸಿದನು.

ಮರುದಿನದಿಂದ ಮಂದಬುದ್ಧಿ ಬಂಗಾರಯ್ಯ ಹೇಳಿದ ಕೆಲಸಗಳನ್ನು ಹೇಳಿದ ಹಾಗೇ ಮಾಡುವುದನ್ನು ಬಿಟ್ಟನು. ಪ್ರತಿ ಕೆಲಸದ ಒಳಿತು ಕೆಡುಕುಗಳು ಏನೆಂಬುದನ್ನು ಆಲೋಚಿಸಿ, ಈ ಕೆಲಸ ಮಾಡುವುದು ಕೆಡುಕು. ಈ ಕೆಲಸ ಮಾಡುವುದರಿಂದ ಒಳ್ಳೆಯದಾಗುತ್ತದೆ ಎಂದು ಬಂಗಾರಯ್ಯನಿಗೆ ವಿವರಿಸಿ ಹೇಳುತ್ತಿದ್ದನು. ತಾನು ಹೇಳಿದ ಕೆಲಸವನ್ನು ಅವನು ವಿಮರ್ಶಿಸಲು ತೊಡಗಿದುದನ್ನು ನೋಡಿ ಬಂಗಾರಯ್ಯನಿಗೆ ಮತ್ತೆ ಉಪದ್ರ ಬಂತು. ಪರಿಸ್ಥಿತಿ ಮತ್ತೆ ಮೊದಲಿಗೇ ಬಂತು. ಮೊದಲೇ ಬಂಗಾರಯ್ಯನಿಗೆ ಕೋಪ ಜಾಸ್ತಿ.

"ಎಲೋ ಮಂದಬುದ್ಧೀ, ಸಣ್ಣ ಸಣ್ಣ ಕೆಲಸಗಳಲ್ಲಿ ಬೇಕಾದರೆ ನಿನ್ನ ತಿಳುವಳಿಕೆ ಉಪಯೋಗಿಸು. ಬೇಡೆನ್ನಲಾರೆ. ಉಳಿದ ವಿಷಯಗಳಲ್ಲಿ ನಾನು ಹೇಳಿದ



ಕೆಲಸ ಮಾಡುವುದಷ್ಟೇ ನಿನ ಕೆಲಸ. ಒಳಿತು ಕೆಡುಕುಗಳನ್ನು ನೀನು ಆಲೋಚಿಸಿ ನನಗೆ ಹೇಳ ಕೂಡದು" ಎಂದು ಮಂದಬುದ್ಧಿಗೆ ಹೇಳಿದನು ಬಂಗಾರಯ್ಯ.

"ಅದೇನು ಮಾತು ಸ್ವಾಮಿ ? ನೀವು ತಪ್ಪು ಮಾಡುತ್ತಾ ಇದ್ದರೆ, ಗೊತ್ತಿದ್ದೂ ಮಾಡಬೇಕೆಂದರೆ ಹೇಗೆ? ಅದು ತಪ್ಪು ಎಂದು ನಿಮಗೆ ಹೇಳಲೇಬೇಕು ನಾನು, ಅದು ನಿಮ್ಮ ಒಳ್ಳೆಯದಕ್ಕೆ ತಾನೇ ?" ಎಂದನು ಮಂದ ಬುದ್ಧಿ.

"ಹಾಗಾದರೆ ನಿನ್ನನ್ನು ಕೆಲಸದಿಂದ ತೆಗೆದು ಹಾಕುತ್ತೇನೆ. ಈ ಕ್ಷಣವೇ ಇಲ್ಲಿಂದ ಹೊರಟು ಹೋಗು" ಎಂದನು ಬಂಗಾರಯ್ಯ ಕೋಪದಿಂದ.

"ನೀವು ಹೋಗೆಂದರೆ ಹೋಗುವೆನೆ ? ಇಲ್ಲೇ ಇರುತ್ತೇನೆ. ಇಲ್ಲೇ ನನಗೆ ಚೆನ್ನಾಗಿದೆ" ಎಂದನು ಮಂದಬುದ್ಧಿ ಮೊಂಡುತನದಿಂದ.

ಬಂಗಾರಯ್ಯನಿಗೆ ಪೇಚಾಟಕ್ಕಿಟ್ಟಿತು. "ನಮ್ಮೂರಿನ ನ್ಯಾಯಾಧಿಪತಿ ಹೇಳುವ ಹಾಗೆ ಕೇಳೋಣ, ಬಾ" ಎಂದು ಮಂದ ಬುದ್ಧಿಯನ್ನು ಕರೆದುಕೊಂಡು ನ್ಯಾಯಾಧಿಕಾರಿಯ ಬಳಿಗೆ ಹೋಗಿ, ನಡೆದ ಸಮಾಚಾರವನ್ನು ಅಲ್ಲಿ ಹೇಳಿಕೊಂಡನು.

ನ್ಯಾಯಾಧಿಕಾರಿ ಮಂದಬುದ್ಧಿಯನ್ನು ನೋಡಿ "ಮಂದಬುದ್ಧೀ, ನಿನಗೆ ಬಂಗಾರಯ್ಯ ತುಂಬಾ ಒಳ್ಳೆಯದು ಮಾಡಿದ್ದಾರೆ. ಇವರಿಗೆ ನೀನು ತುಂಬಾ ಋಣಪಟ್ಟಿರುವಿ ಗೊತ್ತಷ್ಟೇ ?" ಎಂದರು.

ಅದಕ್ಕೆ ಮಂದಬುದ್ಧಿ "ಹೌದು, ಇವರು ನನಗೆ ಉಪಾಧ್ಯಾಯರಿಂದ ನನ್ನ ಬುದ್ಧಿಗೆ ಒಳ್ಳೆಯ ಆಲೋಚನೆ ಬರುವ ಹಾಗೆ ಮಾಡಿದ್ದಾರೆ. ಅದರಿಂದಾದ ಒಳ್ಳೆಯದು ಏನಿದೆ ? ನನ್ನ ಬುದ್ಧಿ ಇವರಿಗೇ ಉಪಯೋಗವಿಲ್ಲದೆ ನನ್ನನ್ನು ಹೋಗೆಂದು ಹೇಳುತ್ತಾರೆ. ಇಲ್ಲಿ ನನ್ನ ಕೆಲಸ ಹೋದರೆ ಇವರು ಕಲಿಸಿದ ವಿದ್ಯೆಯಿಂದ ನನಗೆ ಎಲ್ಲಿಯೂ ಕೆಲಸ ಸಿಗಲಿಕ್ಕಿಲ್ಲ. ಮತ್ತೆ ನನ್ನ ಗತಿ ಏನು ?" ಎಂದನು.

"ಬಂಗಾರಯ್ಯ ಹೇಳಿದ ಹಾಗೆ ಕೇಳಿದರೆ ಯಾವ ಗೊಡವೆಯೂ ಇಲ್ಲವಷ್ಟೇ ?" ಎಂದರು ನ್ಯಾಯಾಧಿಕಾರಿಯವರು.



"ಸ್ವಲ್ಪ ಮಟ್ಟಿಗೆ ಬುದ್ಧಿಯುಳ್ಳವರು ಕೂಡಾ ಇವರು ಹೇಳುವ ಮಾತು ಕೇಳಲಿಕ್ಕಿಲ್ಲ. ಅವರು ಹೇಳಿದ ಹಾಗೆ ನಾನು ಮಾಡಬೇಕಾದರೆ ನನ್ನನ್ನು ಮೊದಲಿನ ಹಾಗೆ ಮಂದಬುದ್ಧಿಯಾಗಿಯೇ ಮಾಡಿಬಿಡಲಿ" ಎಂದನು ಮಂದಬುದ್ಧಿ.

ಅದನ್ನು ಕೇಳಿ ಬಂಗಾರಯ್ಯನಿಗೆ ಬಹಳ ಕೋಪ ಬಂತು. "ಎಲೋ, ನಿನಗೆ ಬುದ್ಧಿ ನೀತಿ ಕಲಿಸಿದ ಉಪಾಧ್ಯಾಯರನ್ನು ಕರೆಯಿಸಿ ನಿನ್ನನ್ನು ಮತ್ತೆ ಮೊದಲಿನ ಹಾಗೆ ಮಾಡಲಿಕ್ಕೆ ಹೇಳುತ್ತೇನೆ" ಎಂದನು.

ಮಂದಬುದ್ಧಿ ನ್ಯಾಯಾಧಿಕಾರಿಯನ್ನು ನೋಡಿ, "ಕೇಳಿದಿರಾ ಸ್ವಾಮಿ ? ಈಗ ಆ ಉಪಾಧ್ಯಾಯರು ನನಗೆ ಕಲಿಸಿದ್ದನ್ನೆಲ್ಲಾ ಹೇಗೆ ವಾಪಸು ತೆಗೆದುಕೊಳ್ಳುತ್ತಾರೆ ? ಇವರು ಹೀಗೆ ಅಸಂಬದ್ಧ ಮಾತೇ ಹೇಳುತ್ತಾರೆ" ಎಂದನು.

ನ್ಯಾಯಾಧಿಕಾರಿ ಕೂಡಲೇ ಬಂಗಾರಯ್ಯನನ್ನು ನೋಡಿ, "ನಿಮ್ಮ ಈ ಕೆಲಸದಾಳು ನಿಮ್ಮ ಕೆಲಸಗಳನ್ನು ಮಾಡಲಿಕ್ಕೆ ಮಾತ್ರವಲ್ಲದೆ, ನಿಮಗೆ ಆಲೋಚನೆ ಹೇಳಲಿಕ್ಕೆ ಕೂಡಾ ಅಗತ್ಯ ಬೇಕಾಗಿರುತ್ತಾನೆ, ಆದುದರಿಂದ ನೀವು ಇವನನ್ನು ಕೆಲಸದಿಂದ ತೆಗೆಯಲು ಸಾಧ್ಯವಿಲ್ಲ. ಹಾಗೆ ಮಾಡಬೇಕಾದರೆ ಇವನಿಗೆ ಬೇರೊಂದು ಕಡೆಯಲ್ಲಿ ಕೆಲಸ ಕೊಡಿಸಬೇಕು" ಎಂದು ಹೇಳಿದರು.

ಆ ಮಾತು ಕೇಳಿ ಬಂಗಾರಯ್ಯ ಬೇಸ್ತು ಬಿದ್ದು ದಿಕ್ಕು ದಿಕ್ಕು ನೋಡಿದನು. ಆಗ ನ್ಯಾಯಾಧಿಕಾರಿ ಮುಗುಳು ನಗುತ್ತ "ಬಂಗಾರಯ್ಯಾ, ಹೆಚ್ಚಿಗೆ ದಿಗಿಲು ಬೀಳಬೇಡಿ. ಒಳ್ಳೆಯ ಬುದ್ಧಿವಂತಿಕೆಯೂ, ವಿನಯವೂ ಇರುವ ಇವನನ್ನು ಮಂದಬುದ್ಧಿಯಾಗಿ ನಿಮ್ಮ ಮನೆಯಲ್ಲಿ ನಟಿಸಿಕೊಂಡಿರುವಂತೆ ಹೇಳಿ ನಿಮ್ಮ ಬಳಿಗೆ ಕಳುಹಿಸಿದವನು ನಾನೇ. ಊರೊಳಗೆ ನೀವು ದೊಡ್ಡ ಆಸ್ತಿವಂತರೂ ಧನಿಕರೂ ಆದವರು. ದಪ್ಪ ಶರೀರವಾದುದರಿಂದ ಕೋಪ ನಿಮಗೆ ಹೆಚ್ಚಾಗಿ ಯಾವ ಆಳುಗಳೂ ನಿಲ್ಲದಂತಾಗಿದೆ. ಉಳಿದುದರಲ್ಲಿ ನೀವು ಒಳ್ಳೆಯವರೆಂದು ಬಲ್ಲೆನು. ಆಳುಗಳಿಲ್ಲದ ಕಷ್ಟದಲ್ಲಿರುವ ನಿಮಗೆ ಒಳ್ಳೆಯ ಕೆಲಸದಾಳನ್ನು ಕುದುರಿಸಲಿಕ್ಕೇ ನಾನು ಹೀಗೆ ಮಾಡಿಸಿದೆನು" ಎಂದರು.

"ಎಲೆಲಾ ! ಇದನ್ನು ಮೊದಲೇ ಹೇಳಬಹುದಿತ್ತಲ್ಲ ಸ್ವಾಮಿ !" ಎಂದು ಬಂಗಾರಯ್ಯ ಮಂದಬುದ್ಧಿಯನ್ನು ನೋಡಿ, "ಭಲೇ ! ಮಂದಬುದ್ಧಿಯ ಹಾಗೆ ಬಹು ಚೆನ್ನಾಗಿ ನಟಿಸಿದಿ ! ಆದುದಾಯಿತಲ್ಲ, ನನ್ನಂಥವನು ನಿನಗೆ ಯಜಮಾನನಾಗಿ, ನಿನ್ನಂಥವನು ನನ್ನ ಕೆಲಸದ ಆಳಾಗಿ ಕೊಡುವುದು ನಮ್ಮಿಬ್ಬರ ಅದೃಷ್ಟ. ಮನೆಗೆ ಹೋಗೋಣ ಬಾ !" ಎಂದನು ಆನಂದದಿಂದ.





ವಿಷ್ಣು ಜಯ ವಿಜಯರನ್ನು ನೋಡಿ, "ತಿಳಿಯಿತು. ಸನಕಸನಂದನಾದಿಗಳಂತಹ ಮಹಾಮುನಿಗಳ ಶಾಪವು ಅಮೋಘವಾದುದು. ಆ ಶಾಪ ಕಾಲವನ್ನು ನೀವು ನನ್ನ ಮಿತ್ರ ಭಾವದಲ್ಲಿ ಏಳು ಜನ್ಮ ಪಡೆದು ಬರುವಿರಾ, ಅಥವಾ ನನ್ನನ್ನು ದ್ವೇಷಿಸುತ್ತಾ ಶತ್ರು ಭಾವದಲ್ಲಿ ಮೂರು ಜನ್ಮಗಳಲ್ಲಿ ನನ್ನಿಂದ ಅಂತ್ಯ ಪಡೆದು ಇಲ್ಲಿಗೆ ಬರುವಿರಾ?" ಎಂದು ಕೇಳಿದನು.

ಅದನ್ನು ಕೇಳಿ ಜಯವಿಜಯರು ವಿಷ್ಣುವಿನ ಅನುಗ್ರಹಕ್ಕೆ ಸಂತೋಷಪಟ್ಟು, ಆದಷ್ಟು ಬೇಗ ವಿಷ್ಣು ಸಾನ್ನಿಧ್ಯವನ್ನು ಸೇರಿಕೊಳ್ಳಬೇಕೆಂದು, ಎರಡನೆಯ ವಿಧಾನದ ಮೂರು ಜನ್ಮಗಳೇ ಇರಲಿ ಎಂದು ಕೇಳಿಕೊಂಡರು.

ಆಗ ಸನಕಸನಂದನಾದಿಗಳು ಜಯವಿಜಯರನ್ನು ಮೆಚ್ಚಿಕೊಳ್ಳುತ್ತ ವಿಷ್ಣುವನ್ನು ನೋಡಿ, "ದೇವರ ದೇವಾ! ರಾಗ ದ್ವೇಷಗಳು ನಿನಗೆ ಸಮಾನವೆಂದೂ, ನಿನ್ನನ್ನು ದ್ವೇಷಿಸುವವರು ಬೇಗನೇ ನಿನ್ನನ್ನು ಸೇರಿಕೊಳ್ಳುವರೆಂದೂ ಈಗ ನಮಗೆ ಗೊತ್ತಾಯಿತು. ನಿನ್ನ ದ್ವಾರಪಾಲಕರನ್ನು ದುಡುಕು ಬುದ್ಧಿಯಿಂದ ಶಪಿಸಿಬಿಟ್ಟೆವು. ಅದಕ್ಕಾಗಿ ನಾಚುತ್ತೇವೆ. ನಮ್ಮನ್ನು ಕ್ಷಮಿಸು ದೇವಾ!" ಎಂದು ಕೈಮುಗಿದರು.

"ನನ್ನ ದರ್ಶನಕ್ಕೆ ಬರುವವರ ತಾರತಮ್ಯ ತಿಳಿಯದೆ ಹೋಗಲು ಜಯವಿಜಯರಿಗೆ ಬಂದ ಸ್ವಲ್ಪ ಮಾತ್ರ ಗರ್ವವೇ ಕಾರಣ. ಅದನ್ನು ಕೂಡಲೇ ಶಾಪದಿಂದ ತೊಳೆದಿರಿ" ಎಂದನು ವಿಷ್ಣು.

ಶಾಪಗ್ರಸ್ತರಾದ ಜಯವಿಜಯರು ಕಶ್ಯಪ ಪ್ರಜಾಪತಿಯ ಹೆಂಡತಿಯ ಹೊಟ್ಟೆಯಲ್ಲಿ ಹಿರಣ್ಯಕಶಿಪು, ಹಿರಣ್ಯಾಕ್ಷರಾಗಿ ಜನ್ಮಿಸಿದರು.

ಈ ಅಣ್ಣ, ತಮ್ಮಂದಿರು ಮಹಾ ಪರಾಕ್ರಮಿಗಳಾಗಿದ್ದು, ತಪಸ್ಸು ಮಾಡಲು ಹೋದರು. ದೊಡ್ಡ ತಪಸ್ಸು ಮಾಡಿ ಬ್ರಹ್ಮನನ್ನು ಮೆಚ್ಚಿಸಿ ವರಗಳನ್ನು ಪಡೆದರು. ವಿಷ್ಣುವಿನ ಮೇಲೆ ಶತ್ರು ಭಾವವನ್ನು ಬೆಳೆಯಿಸಿಕೊಂಡು, ಕತ್ತಿಮಸೆಯುತ್ತಿದ್ದರು.

ಹಿರಿಯನಾದ ಹಿರಣ್ಯಕಶಿಪು ರಾಕ್ಷಸರಿಗೆ ರಾಜನಾದನು. ಹಿರಣ್ಯಾಕ್ಷನು ವಿಷ್ಣುವನ್ನು ಕಾಡುವಂತಹ



ಘೋರ ಕೃತ್ಯಗಳನ್ನೇ ಮಾಡಿ ಮಾಡಿ, ಕಡೆಗೆ ಭೂಮಿಯನ್ನು ಉರುಳಿಸಿಕೊಂಡು ಹೋಗಿ, ರಸಾತಲದವರೆಗೆ ಸಮುದ್ರದಲ್ಲಿ ದೂಡಿಬಿಟ್ಟನು. ಮುಳುಗಿಹೋದ ಭೂದೇವಿ, ವಿಷ್ಣುವನ್ನು ನೆನೆಯುತ್ತಾ, ಮೊರೆಯಿಡ ತೊಡಗಿದಳು.

ಭೂದೇವಿಯ ಮೊರೆಯನ್ನು ಕೇಳಿ ವಿಷ್ಣು ಹತ್ತು ಅವತಾರಗಳಲ್ಲಿ ಮೂರನೆಯದಾದ ವರಹಾವತಾರ ವನ್ನು ಎತ್ತಿದನು. ಅದು ಹೇಗೆಂದರೆ,

ಬ್ರಹ್ಮನು ಒಂದು ಮಹಾ ಹೋಮವನ್ನು ಮಾಡುತ್ತಿರುವಾಗ, ಯಜ್ಞಕುಂಡದಿಂದ ಬೆಳ್ಳಗಿನ ಕಾಂತಿಯಿಂದ ಹೊಳೆಯುವ ಅತೀ ಸಣ್ಣ ರೇಖೆ ಯೊಂದು ಮೇಲೆದ್ದಿತು. ಅದು ಕ್ರಮವಾಗಿ ದೊಡ್ಡ ದಾಗಿ ಬೆಳೆದು ಕಾಡು ಹಂದಿಯ ರೂಪಕ್ಕೆ ಮಾರ್ಪಟ್ಟಿತು. ಕೊಂಬು ಕೋರೆದಾಡೆಗಳಿಂದೊಪ್ಪುವ ಆ ಕಾಡು ಹಂದಿ ವಿಷ್ಣುವಿನ ಅವತಾರವೆಂದು ತಿಳಿದು ಬ್ರಹ್ಮಾದಿ ದೇವತೆಗಳು ಅದನ್ನು ಯಜ್ಞ ವರಾಹವೆಂದೂ, ಆದಿ ವರಾಹವೆಂದೂ ಹೇಳಿಕೊಂಡು, ಕೀರ್ತಿಸುತ್ತ, ವಿಷ್ಣುವನ್ನು ಸ್ತುತಿ ಮಾಡಿದರು.

ಯಜ್ಞವರಾಹವು ಇನ್ನೂ ದೊಡ್ಡ ದೊಡ್ಡ ದಾಗುತ್ತಾ, ಬ್ರಹ್ಮಾಂಡದ ಆಕೃತಿಯನ್ನು ಹೊಂದಿತು. ಬಲಿಷ್ಠವಾದ ಕಾಲುಗಳು, ಉಕ್ಕಿನ ಕವಚ ದಂತಹ ಚರ್ಮ, ಕೆಂಡಗಳಂತಹ ಕಣ್ಣುಗಳು, ಕೊರಳಿನಿಂದ ಬಾಲದವರೆಗೂ ನೆಟ್ಟಗೆ ನಿಂತು ಬಂಗಾರದಂತೆ ಹೊಳೆಯುತ್ತಿರುವ ಕೂದಲುಗಳು, ವಿಶ್ವವನ್ನೇ ನಡುಗಿಸುವಂತಹ ಘೂಂಕೃತ ಧ್ವನಿ. ಇಂತಹ ಯಜ್ಞವರಾಹದ ಮೂರ್ತಿಯ ಮೇಲೆ ಖಡ್ಗದಂತಹ ಕೊಂಬು ಕೂಡಾ ಧಗಧಗನೆ ಹೊಳೆಯುತ್ತಿದ್ದಿತು.

ವರಾಹಾವತಾರವು ಮಿಂಚಿನ ವೇಗದಲ್ಲಿ ರಸಾ ತಲಕ್ಕೆ ಓಡತೊಡಗಿತು. ಅದು ಅಡಿಗಳನ್ನಿಡುವ ವೇಗಕ್ಕೆ ದಿಕ್ಕುಗಳು ನಡುಗಿದುವು. ಅದರ ಉಸಿರಿಗೆ ಪ್ರಳಯಕಾಲದ ವಾಯು ಬೀಸಿತು.

ಆ ವರಾಹವು ಸಮುದ್ರದೊಳಗೆ ರಸಾತಲದ ವರೆಗೆ ಹೋಗಿ, ಅಲ್ಲಿ ಮುಳುಗಿದ್ದ ಭೂಮಿಯನ್ನು ಮೂರ್ತಿಯ ಕೊಂಬಿನಲ್ಲಿ ಎತ್ತಿ ಮೇಲಕ್ಕೆ ತಂದಿತು.

ಅದೇ ಸಮಯದಲ್ಲಿ ಹಿರಣ್ಯಾಕ್ಷನು ವರುಣನ ಮೇಲೆ ದಾಳಿ ಮಾಡಿ ಯುದ್ಧಕ್ಕೆ ಕರೆದನು. ಆಗ ವರುಣನು ಅವನನ್ನು ನೋಡಿ, "ಎಲೋ ಹಿರಣ್ಯಾಕ್ಷ, ವೀರಾಧಿವೀರನಾದ ನೀನು ಹೋರಾಡಬೇಕಾದುದು ನನ್ನ ಹತ್ತಿರವಲ್ಲ. ರಸಾತಲದಿಂದ ಭೂಮಿಯನ್ನು ಎತ್ತಿಕೊಂಡು ಹೋಗುವ ಯಜ್ಞ ವರಾಹನೊಂದಿಗೆ" ಎಂದು ಹೇಳಿದನು. ಹಿರಣ್ಯಾಕ್ಷನು ಅದನ್ನು ಕೇಳಿ ಅಲ್ಲಿಂದ ಸೀದಾ ಹಿಂದಿರುಗಿ ಯಜ್ಞ ವರಾಹನ ಮುಂದೆ ಹೋಗಿ ಢೀ ಕೊಟ್ಟನು.

ವರಾಹ ರೂಪದ ವಿಷ್ಣುವಿನೊಂದಿಗೆ ಹಿರಣ್ಯಾಕ್ಷನು ದೊಡ್ಡ ಪರಾಕ್ರಮದಿಂದ ಹೋರಾಡುತ್ತ, ಗದೆ ಯಿಂದ ವಿಷ್ಣುವಿನ ಗದೆಯನ್ನು ಹೊಡೆದು ಉರುಳಿಸಿ ಸುಮ್ಮನೆ ನಿಂತನು. ವಿಷ್ಣು ಅವನ ಯುದ್ಧನೀತಿ

ಯನ್ನು ಮೆಚ್ಚಿಕೊಳ್ಳುತ್ತ, ಮತ್ತೆ ತನ್ನ ಗದೆಯನ್ನು ಎತ್ತಿಕೊಂಡು ನಿಲ್ಲಲು ಹಿರಣ್ಯಾಕ್ಷನು ಮತ್ತೆ ಹೊಡೆಯಲು ತೊಡಗಿದನು. ಇಬ್ಬರಿಗೂ ಘೋರ ಸಂಗ್ರಾಮವು ಸಾಗಿತು. ಕಡೆಗೆ ವರಾಹಾವತಾರವು ತನ್ನ ಕೊಂಬು ದಾಡೆಗಳಿಂದ ಹಿರಣ್ಯಾಕ್ಷನನ್ನು ತಿವಿದು ಕೊಂದುಹಾಕಿತು.



ಜಯಶಾಲಿಯಾಗಿ ನಿಂತ ವರಾಹರೂಪೀ ವಿಷ್ಣುವನ್ನು ಭೂದೇವಿ ವರಿಸಿಕೊಂಡಳು. ವರಾಹಮೂರ್ತಿ ಭೂದೇವಿಯನ್ನು ಕಂಕುಳಲ್ಲಿ ಎತ್ತಿ ತೊಡೆಯ ಮೇಲೆ ಕುಳ್ಳಿರಿಸಿಕೊಂಡನು. ಬ್ರಹ್ಮಾದಿ ದೇವತೆಗಳು ಹೂಮಳೆಗರೆಯುತ್ತಾ, ಭೂ ರಮಣನೆಂದೂ, ಜಗದೋದ್ಧಾರಕನೆಂದೂ ಸ್ತೋತ್ರಮಾಡಿದರು.

ಈ ಸಮಾಚಾರವು ಹಿರಣ್ಯಕಶಿಪುವಿಗೆ ತಿಳಿಯಿತು. ಹಂದಿಯ ರೂಪದಲ್ಲಿ ಬಂದು ತನ್ನ ತಮ್ಮನನ್ನು ಕೊಂದುಹಾಕಿದ ವಿಷ್ಣುವಿನ ಮೇಲೆ ಅವನ ಹಗೆ ಇನ್ನಿಷ್ಟು ಹೆಚ್ಚಾಯಿತು. ಈ ಹಗೆ ಸಾಧಿಸುವ ತೀವ್ರ ಸಂಕಲ್ಪದಿಂದ, ಮೊದಲು ಬ್ರಹ್ಮನಿಂದ ಇನ್ನಿಷ್ಟು ವರಗಳನ್ನು ಪಡೆಯಲು ಮತ್ತೆ ತಪಸ್ಸಿಗೆ ಹೋದನು. ಆ ಸಮಯದಲ್ಲಿ ಅವನ ಹೆಂಡತಿ ಲೀಲಾವತಿ ಗರ್ಭಿಣಿಯಾಗಿದ್ದಳು.

ಅವಳ ಗರ್ಭಾವಾಸದಲ್ಲಿರುವ ತನ್ನ ಶತ್ರುವನ್ನು ಹತಮಾಡಲು, ಇಂದ್ರನು ಮಾಯಾ ರೂಪದಲ್ಲಿ ಬಂದು ಲೀಲಾವತಿಯನ್ನು ಸೆರೆಹಿಡಿದು, ಆಕಾಶ ಮಾರ್ಗದಲ್ಲಿ ಎತ್ತಿಕೊಂಡು ಹೋಗುತ್ತಿದ್ದಾಗ, ನಾರದನು ಅವನ ಇದಿರಿಗೆ ಬಂದು "ದೇವೇಂದ್ರಾ! ಎಂತಹ ಕೆಲಸಕ್ಕೆ ತಲೆಹಾಕಿದೆ? ನಿನ್ನ ಪ್ರಯತ್ನವನ್ನು ನಿಲ್ಲಿಸು! ಸರ್ವಕಾಲ, ಸರ್ವಾವಸ್ಥೆಗಳಲ್ಲಿಯೂ ಇವಳ ಗಂಡ ಹಿರಣ್ಯಕಶಿಪು ವಿಷ್ಣುವಿನ ಮೇಲೆ ಹಗೆಯನ್ನು ಕುರಿತೇ ನೆನೆದುಕೊಂಡಿರುವುದರಿಂದ, ಲೀಲಾವತಿಯ ಗರ್ಭದಲ್ಲಿರುವ ಶಿಶುವಿಗೆ ಆ ವಿಷ್ಣುವಿನ ಧ್ಯಾನ ಅಂಟಿಕೊಂಡಿದೆ ಗೊತ್ತಾ? ಅಪ್ಪನಿಗಿರುವ ಹಗೆ ಭಕ್ತಿಯಾಗಿ ರೂಪಾಂತರಗೊಂಡು ಈ ಶಿಶುವಿನಲ್ಲಿ ಸೇರಿದೆ. ವಿಷ್ಣು ಮಾಯವೆಂದರೆ ಇದೇ! ಪ್ರಕೃತಿ ವಿಶೇಷವೇ ವಿಷ್ಣುವಿನ ಮಾಯೆ! ಲೀಲಾವತಿ ಬಹುದೊಡ್ಡ ವಿಷ್ಣು ಭಕ್ತನನ್ನು ಪ್ರಸವಿಸುತ್ತಾಳೆ. ಇವಳ ಹೊಟ್ಟೆಯಲ್ಲಿ ನಿನ್ನ ಪದವಿಗೆ ಆಪತ್ತು ತರುವ ರಾಕ್ಷಸನಾರೂ ಹುಟ್ಟುವುದಿಲ್ಲ. ಪೂಜ್ಯಳಾದ ಈ ಸತೀಮಣಿಯನ್ನು ಬಿಟ್ಟು ನಿನ್ನ ಪಾಡಿಗೆ ಹೋಗಿಬಿಡು" ಎಂದು ಹೇಳಿ ಲೀಲಾವತಿಯನ್ನು, ತಾನು ಆಗಾಗ ವಿಶ್ರಮಿಸಲು ನಿರ್ಮಿಸಿಕೊಂಡ ಆಶ್ರಮಕ್ಕೆ ಕರೆದುಕೊಂಡು ಹೋದನು.

ಆಶ್ರಮದಲ್ಲಿ ನಾರದನು ವೇದಾಂತ ವಿಷಯಗಳನ್ನೂ, ವಿಷ್ಣುವಿನ ಗುಣ ಗಣಗಳನ್ನೂ ವರ್ಣಿಸಿ ವರ್ಣಿಸಿ ಹೇಳಿಕೊಂಡಿರುವಾಗ, ಲೀಲಾವತಿಯ ಗರ್ಭದೊಳಗಿದ್ದ ಶಿಶು ಆಸಕ್ತಿಯಿಂದ ಕೇಳುತ್ತ ಹೂಂಗುಡುತ್ತಿದ್ದಿತು. ಹೀಗೆ ತಿಂಗಳು ತುಂಬಿದ ಮೇಲೆ ಲೀಲಾವತಿ ಕುಮಾರನನ್ನು ಪ್ರಸವಿಸಿದಳು.



ನೋಡಿದನು. ಕುಮಾರನಿಗೆ ಪ್ರಹ್ಲಾದನೆಂದು ನಾಮ ಕರಣ ಮಹೋತ್ಸವವನ್ನು ನಡೆಸಿದ ಮೇಲೆ ಕುಮಾರ ನನ್ನೂ, ಹೆಂಡತಿಯನ್ನೂ ರಾಜಧಾನಿಗೆ ಕರೆದು ಕೊಂಡು ಹೋದನು.

ಇಂದ್ರನು ಮಾಡಿದ ಕೆಲಸವನ್ನು ತಿಳಿದು ಮೊದಲು ಅವನಿಗೆ ಪ್ರತೀಕಾರ ಮಾಡಲು ನಿಶ್ಚಯಿಸಿದನು ಹಿರಣ್ಯಕಶಿಪು. ಅವನು ಕೂಡಲೇ ಸ್ವರ್ಗದ ಮೇಲೆ ದಂಡಯಾತ್ರೆ ಮಾಡಿ, ಇಂದ್ರನನ್ನು ಓಡಿಸಿ, ಸ್ವರ್ಗ ಸಿಂಹಾಸನವನ್ನು ಸ್ವಾಧೀನಪಡಿಸಿಕೊಂಡನು. ದಿಕ್ಕು ಗಳೆಲ್ಲವನ್ನೂ ಜಯಿಸಿ ದಿಕ್ಪಾಲಕರನ್ನು ತನ್ನ ಆಜ್ಞೆಗೆ ಒಳಪಡಿಸಿಕೊಂಡನು. ದೇವತೆಗಳನ್ನೆಲ್ಲಾ ಹಿಡಿದು ದನಗಳನ್ನು ಬಡಿಯುವ ಹಾಗೆ ಬಡಿದನು. ಶಚೀ ದೇವಿಯನ್ನು ಅವಮಾನಪಡಿಸಲು ನೋಡಿದಾಗ ಲೀಲಾವತಿ ಅವನನ್ನು ತಡೆದಳು. ಈ ರೀತಿಯಾಗಿ ಹಿರಣ್ಯಕಶಿಪು ಮೇಲೆ ಮೇಲೆ ವಿಜೃಂಭಿಸಿ ಮುನಿಗಳ ಆಶ್ರಮಗಳನ್ನು ಸುಡಿಸಿ ಹಾಕಿದನು. ವಿಷ್ಣುವಿನ ಮೇಲೆ ವಿಶ್ವಾಸವಿಟ್ಟವರನ್ನೆಲ್ಲಾ ಚಿತ್ರಹಿಂಸೆಗಳಿಂದ ವಧಿಸಿದನು. ವಿಷ್ಣುವಿಗೆ ವಿರುದ್ಧವಾಗಿ ವರ್ತಿಸು ವುದೇ ಅವನ ಪರಮ ಧ್ಯೇಯವಾಗಿ ಹೋಯಿತು.

ಅದರೂ ವಿಷ್ಣು ತನ್ನ ಇದಿರಿಗೆ ಬರಲಿಲ್ಲವೆಂದು ಕೊಂಡು, ಆ ರೋಷವಿಲ್ಲದ ಹೇಡಿಯ ವಾಸಸ್ಥಾನ ವನ್ನೇ ಮುಳುಗಿಸಿಬಿಡುತ್ತೇನೆಂದು ವೈಕುಂಠಕ್ಕೆ ದಾಳಿ ಹೊರಟನು. ಅಲ್ಲೆಲ್ಲಿಯೂ ವಿಷ್ಣು ಕಾಣಲಿಲ್ಲ.

"ನನಗೆ ಹೆದರಿ ಅದೃಶ್ಯನಾಗಿ ಎಲ್ಲೋ ಮೂಲೆ ಯಲ್ಲಿ ಅಡಗಿದ್ದಾನೆ ಹೇಡಿ ಹಂದಿ!" ಎಂದು ಹಿರಣ್ಯ ಕಶಿಪು ತನ್ನ ಮನೆಗೆ ಹಿಂದಿರುಗಿದನು.

ಪ್ರಹ್ಲಾದನು ದಿನದಿನಕ್ಕೆ ಪ್ರವರ್ಧಮಾನವಾಗಿ ಬಳೆಯುತ್ತಾ, ಯಾವಾಗಲೂ ವಿಷ್ಣು ಸ್ಮರಣೆ ಮಾಡುತ್ತಾ ಆಟಪಾಟಗಳ ಲೀಲೆಗಳಿಂದ ಎಲ್ಲರನ್ನೂ ಸಂತೋಷಪಡಿಸುತ್ತಾ ಇದ್ದನು. ಅದೆಲ್ಲ ಸರಿ ಯಾಗಿದ್ದರೂ, ಅವನ ವಿಷ್ಣು ಸ್ಮರಣೆಯ ಸಂಗತಿ

ಅತ್ತ ಹಿರಣ್ಯಕಶಿಪು ಘೋರವಾದ ತಪಸ್ಸನ್ನು ಮಾಡಲು, ಬ್ರಹ್ಮನು ಪ್ರತ್ಯಕ್ಷನಾದನು. ಆಗ ಹಿರಣ್ಯ ಕಶಿಪು, ತನಗೆ ಭೂಮಿಯ ಮೇಲಾಗಲಿ, ಆಕಾಶದ ಮೇಲಾಗಲಿ, ಹಗಲಲ್ಲಾಗಲಿ, ಇರುಳಲ್ಲಾಗಲಿ, ಮನೆ ಯೊಳಗಾಗಲಿ, ಹೊರಗಾಗಲಿ, ಮೃಗಗಳಿಂದಾಗಲಿ, ಮನುಷ್ಯರಿಂದಾಗಲಿ, ದೇವತೆಗಳಾರಿಂದಲೇ ಆಗಲಿ, ಜೀವವಿರುವ ಪ್ರಾಣಿಗಳಿಂದಾಗಲಿ, ಜೀವವಿಲ್ಲದವು ಗಳಿಂದಾಗಲಿ, ಸೃಷ್ಟಿಯಲ್ಲಿರುವ ಯಾವ ರೂಪ ದಿಂದಲೇ ಆಗಲಿ ಹೀಗೆ ಅನೇಕ ವಿಧಗಳಿಂದ ತನಗೆ ಸಾವು ಬಾರದಂತಹ ವರವನ್ನು ಕೇಳಿದನು. ಬ್ರಹ್ಮನು ಹಾಗೆಯೇ ವರಗಳನ್ನೆಲ್ಲ ಕೊಟ್ಟು ಅಂತರ್ಧಾನನಾದನು.

ಹೀಗೆ ವರಗಳನ್ನು ಹೊಂದಿದ ಮೇಲೆ ಇನ್ನು ತನಗೆ ಯಾರೂ ಇದಿರಿಲ್ಲವೆಂಬ ಗರ್ವದಿಂದ ಹಿರಣ್ಯ ಕಶಿಪು ತಪಸ್ಸಿನಿಂದ ಎದ್ದು ಬರುತ್ತಿರುವಾಗ, ನಾರದ ನಿಂದ ನಡೆದ ಸಂಗತಿಯನ್ನು ಕೇಳಿ ನಾರದನ ಆಶ್ರಮಕ್ಕೆ ಹೋಗಿ, ತನ್ನ ಹೆಂಡತಿಯನ್ನೂ, ಕುಮಾರನನ್ನೂ

ಮಾತ್ರ ಹಿರಣ್ಯಕಶಿಪುವನ್ನು ವಿಚಾರಕ್ಕೀಡುಮಾಡಿತು. ತನಗೆ ವಿಷ್ಣುವನ್ನು ಸ್ಮರಿಸುವ ಮಗನು ಏಕೆ ಹುಟ್ಟಬೇಕು ? ಇದನ್ನು ಚಿಕ್ಕಂದಿನಲ್ಲೇ ಸರಿಪಡಿಸಿಬಿಡಬೇಕೆಂದು, ಗುರುಪುತ್ರರಾದ ಚಂಡ ಮತ್ತು ಅಮರ್ಕರ ಕೈಗೆ ಒಪ್ಪಿಸಿ ವಿದ್ಯಾಬುದ್ಧಿಗಳನ್ನು ಚೆನ್ನಾಗಿ ಕಲಿಸಬೇಕೆಂದು ಹೇಳಿದನು.

ಪ್ರಹ್ಲಾದನು ಗುರುಕುಲದಲ್ಲಿ ಹರಿಧ್ಯಾನದೊಂದಿಗೆ ಎಲ್ಲಾ ವಿದ್ಯೆಗಳನ್ನೂ ಕಲಿತು ಮುಗಿಸಿದನು. ತನ್ನ ಗೆಳೆಯರಾದ ಹುಡುಗರಿಗೂ, ಸಹ ವಿದ್ಯಾರ್ಥಿಗಳಿಗೂ ವಿಷ್ಣುವಿನ ಮಹತ್ವವನ್ನು ಹೇಳುತ್ತ ಅವರನ್ನೆಲ್ಲ ವಿಷ್ಣುಭಕ್ತರನ್ನಾಗಿ ಮಾಡಿದನು ಪ್ರಹ್ಲಾದ.

ವಿದ್ಯಾವಂತನಾದ ಪ್ರಹ್ಲಾದನನ್ನು ಕರೆದುಕೊಂಡು ಚಂಡಾಮರ್ಕರು ಹಿರಣ್ಯಕಶಿಪುವಿನ ಬಳಿಗೆ ಹೋಗಿ ಒಪ್ಪಿಸಿದರು. ಹಿರಣ್ಯಕಶಿಪು ತನ್ನ ಕುಮಾರನನ್ನು ತೊಡೆಯ ಮೇಲೆ ಕೂಡಿಸಿಕೊಂಡು, "ಕಂದಾ, ಪ್ರಹ್ಲಾದ, ನೀನು ಕಲಿತ ವಿದ್ಯೆಗಳಲ್ಲಿ ಒಳ್ಳೆಯ ಒಂದು ವಾಕ್ಯವನ್ನು ಹೇಳು ನೋಡುವಾ !" ಎಂದನು.

ಅದಕ್ಕೆ ಪ್ರಹ್ಲಾದನು "ಅಪ್ಪಾ, ಗುರುಗಳು ಹೇಳಿಕೊಟ್ಟ ವಿದ್ಯೆಗಳನ್ನೆಲ್ಲಾ ಮನಸ್ಸುಗೊಟ್ಟು ಕಲಿತಿದ್ದೇನೆ. ಎಲ್ಲಾ ವಿದ್ಯೆಗಳಿಗಿಂತಲೂ ದೊಡ್ಡ ವಿದ್ಯೆ ವಿಷ್ಣುವಿನಲ್ಲಿ ಅಚಲ ಭಕ್ತಿಯಿಂದಿರುವುದೇ. ಎಲ್ಲಾ ವಿದ್ಯೆಗಳಿಗೂ ವಿಷ್ಣುಭಕ್ತಿಯೇ ಆಧಾರ !" ಎಂದು ಹೇಳುವುದನ್ನು ಕೇಳುತ್ತಿದ್ದಂತೆ ಹಿರಣ್ಯಕಶಿಪುವಿನ ಕೋಪವು ಏರುತ್ತಾ ಹೋಯಿತು.

ಹಿರಣ್ಯಕಶಿಪು ಪ್ರಹ್ಲಾದನನ್ನು ಕೆಳಕ್ಕೆ ದೂಡಿ, ಕೆಂಗಣ್ಣಿನಿಂದ ಚಂಡಾಮರ್ಕರನ್ನು ನೋಡಿ, "ಇದುವೋ ನೀವು ಇವನಿಗೆ ಕಲಿಸಿದ ವಿದ್ಯೆ ?" ಎಂದು ಕೇಳಿದನು.

ಚಂಡಾಮರ್ಕರಿಬ್ಬರೂ ಹೆದರಿ ನಡುಗುತ್ತ, "ನಮ್ಮ ತಪ್ಪೇನೂ ಇಲ್ಲ ಪ್ರಭೂ. ನಮ್ಮ ಮೇಲೆ ಕೋಪಿಸಬೇಡಿ !" ಎಂದು ಪ್ರಾರ್ಥಿಸಿಕೊಂಡು, ಗುರು



ಕುಲದಲ್ಲಿ ಪ್ರಹ್ಲಾದನು ಯಾವ ವಿಧವಾಗಿ ಪ್ರವರ್ತಿಸಿದನೆಂಬುದನ್ನು ಬಿನ್ನವಿಸಿಕೊಂಡರು.

ಹಿರಣ್ಯಕಶಿಪು ಮಗನನ್ನು ನೋಡಿ, "ಮಗನೇ, ಪ್ರಹ್ಲಾದಾ ! ವಿಷ್ಣು ಮಹಾಕಳ್ಳ. ಹಂದಿಯ ರೂಪ ತಾಳಿ ನಿನ್ನ ಚಿಕ್ಕಪ್ಪನನ್ನು ಕೊಂದಿದ್ದಾನೆ. ನಮ್ಮ ರಾಕ್ಷಸ ಕುಲಕ್ಕೆ ಅವನು ಪರಮ ಶತ್ರು. ನೀನು ವಿಷ್ಣುವನ್ನು ಹೊಗಳುವುದು ಕ್ಷಮಿಸಲಾಗದ ಅಪರಾಧ. ಅದು ಕುಲಕ್ಕೆ ದ್ರೋಹ. ವಿಷ್ಣು ಭಕ್ತಿ ಬಿಟ್ಟುಬಿಡು, ಮರೆತುಬಿಡು !" ಎಂದನು.

ಕೂಡಲೇ ಪ್ರಹ್ಲಾದನು, "ಅಪ್ಪಾ, ದಾನವೇಶ್ವರನಾದ ನೀನು ಹೇಗೆ ಬೇಕಾದರೂ ನನ್ನನ್ನು ಶಾಸಿಸಬಹುದು. ಆದರೆ ನಾನೇನು ಮಾಡಲಿ ? ಕಬ್ಬಿಣದ ತುಂಡು ಅಯಸ್ಕಾಂತವನ್ನು ಹೇಗೆ ಅಂಟಿಕೊಳ್ಳುವುದೋ ಹಾಗೆಯೇ ನನ್ನ ಮನಸ್ಸು ಆ ವಿಷ್ಣುವಿನ ಮೇಲೆಯೇ ಲಗ್ನವಾಗಿ ಹೋಗಿದೆ. ಮಂದಾರ ಪುಷ್ಪದ ಮಕರಂದವನ್ನು ದುಂಬಿಯಿಂದ ಬಿಡಲು



ಹೇಗೆ ಸಾಧ್ಯವಾಗುವುದಿಲ್ಲವೋ ಹಾಗೆಯೇ ವಿಷ್ಣುವನ್ನು ಮರೆತುಬಿಡಲು ನನಗೆ ಆಗುವುದಿಲ್ಲ. ಅದು ನನ್ನ ವಶದಲ್ಲಿ ಇಲ್ಲದ ವಿಚಾರ. ನನ್ನ ಶರೀರದಲ್ಲಿ ಜೀವವಿರುವ ವರೆಗೂ ವಿಷ್ಣು ಚಿಂತನೆ ಇದ್ದೇ ಇರುತ್ತದೆ. ಆ ಜೀವವೂ ವಿಷ್ಣುಮಯ !" ಎಂದನು ಪ್ರಹ್ಲಾದ. ಅವನ ಮಾತಿನ ವೈಖರಿ ವಿದ್ಯೆ ಪೂರ್ತಿ ಮಾಡಿದ ಹುಡುಗನಂತೆಯೇ ಇದ್ದಿತು.

ಇನ್ನೂ ಹಾಲಿನ ವಾಸನೆ ಹೋಗದ ಹುಡುಗ ಪ್ರಹ್ಲಾದನ ತುಟಿಗಳಿಂದ ಹೊರಟ ಆ ಮಾತುಗಳನ್ನು ಕೇಳಿ, ಹಿರಣ್ಯಕಶಿಪು ಬೆರಗಾದನು. ಅದರೊಂದಿಗೆ ಅವನ ಕೋಪವು ನೆತ್ತಿಗೇರಿತು. ಅವನು ಅಗ್ನಿಯಂತೆ ಪ್ರಜ್ವಲಿಸುತ್ತ, ಹಾಗಿದ್ದರೆ ನೀನು ನನ್ನ ಮಗನಾಗಿ ತಪ್ಪಿ ಹುಟ್ಟಿದವನು. ಸಾಯಲೇ ಬೇಕಾದವನು. ಆಹಾರ ಪಾನೀಯಗಳಿಲ್ಲದೆ ಒಣಗಿ ಸಾಯು !" ಎಂದು ಹೇಳಿ ಪ್ರಹ್ಲಾದನನ್ನು ಬೆಳಕು ನುಸುಳದ ಕಾರಾಗಾರದಲ್ಲಿ ಇಡಿಸಿದನು.

ಮಗನಿಗೆ ಬಂದ ಗಂಡಾಂತರವನ್ನು ನೋಡಿ ಲೀಲಾವತಿ ಹಲುಬಿ ಹೊರಳಾಡಿದಳು. ಗಂಡನನ್ನು ತಡೆಯುವ ಶಕ್ತಿ ಅವಳಿಗಿರಲಿಲ್ಲ. ಕೆಲವು ದಿನಗಳು ಕಳೆದುವು.

ಹೆಂಡತಿಯ ದುಃಖವನ್ನು ನೋಡಲಾಗದೆ ಹಿರಣ್ಯಕಶಿಪು ಕಾರಾಗಾರವನ್ನು ತೆರೆಯಿಸಿ, ವಿಷ್ಣು ಕೀರ್ತನೆಯಲ್ಲಿ ತನ್ಮಯನಾಗಿ ಆದೇ ಅರಳಿದ ಕಮಲದಂತೆ ಆನಂದದಲ್ಲಿರುವ ಪ್ರಹ್ಲಾದನನ್ನು ನೋಡಿದನು. ಅನೇಕ ದಿನಗಳಿಂದ ಅನ್ನಪಾನಗಳಿಲ್ಲದೆ ಸೊರಗಿ ಶಲ್ಯನಾಗಿರುವುದಕ್ಕೆ ಬದಲು, ಎಂದಿನಂತೆ ಇರುವವನನ್ನು ನೋಡಿ ಆಶ್ಚರ್ಯವನ್ನೂ, ಹಿಡಿಸಲಾಗದಷ್ಟು ಕೋಪವನ್ನೂ ಹೊಂದಿ, ಪ್ರಹ್ಲಾದನನ್ನು ಆನೆಯ ಕಾಲಿನಿಂದ ತುಳಿಸಿ ಕೊಲ್ಲುವಂತೆ ಆಜ್ಞೆ ಮಾಡಿದನು.

ಪ್ರಹ್ಲಾದನನ್ನು ನೋಡಿದ ಕೂಡಲೇ ಆನೆಗಳು ಸಿಂಹವನ್ನು ನೋಡಿದ ಹಾಗೆ ಹೆದರಿದುವು. ಆದರೂ ಮಾವಟಿಗನು ತಿವಿದು ನಡೆಯಿಸಿದಾಗ, ಪ್ರಹ್ಲಾದನನ್ನು ದಾಟಿಕೊಂಡು ಓಡಿದುವೇ ಹೊರತು ಅವನನ್ನು ಏನೂ ಮಾಡಲಿಲ್ಲ,

ಹಿರಣ್ಯಕಶಿಪುವಿನ ಆಜ್ಞೆಯಂತೆ ಸರ್ಪಗಳಿಂದ ಕಚ್ಚಿಸಿ ಪ್ರಹ್ಲಾದನನ್ನು ಕೊಲ್ಲಿಸಲು ನೋಡಿದಾಗ ಸರ್ಪಗಳು ಪ್ರಹ್ಲಾದನನ್ನು ತಡವಿ ಮುದ್ದಿಸಿ, ಹೆಡೆಯೆತ್ತಿ ಕೊಡೆ ಹಿಡಿದುವು.

ಬೆಟ್ಟದ ಶಿಖರದಿಂದ ಪ್ರಹ್ಲಾದನನ್ನು ದೂಡಿಸಿದ್ದೂ ಆಯಿತು. ಬೆಂಕಿಯಲ್ಲಿ ಹಾಕಿಸಿದರೂ ಅವನ ಬಟ್ಟೆಗೂ ಬೆಂಕಿ ಹಿಡಿಯಲಿಲ್ಲ. ಕಾಲಕೂಟ ವಿಷವನ್ನು ಕುಡಿಸಿದರೂ ಪ್ರಹ್ಲಾದನು ಸುರಕ್ಷಿತನಾಗಿಯೇ ಇದ್ದನು, ಕಡೆಗೆ ಹಿರಣ್ಯಕಶಿಪು ಪ್ರಹ್ಲಾದನನ್ನು ನೋಡಿ "ಎಲೋ, ಶುಂಠಾ, ನೀನು ಸಾಯದೇ ಇರಲು ಕಾರಣವೇನು? ಆ ರಹಸ್ಯ ಹೇಳು, ಕೇಳುತ್ತೇನೆ" ಎಂದನು.

ಪ್ರಹ್ಲಾದನು ನಗುತ್ತಾ "ಅಪ್ಪಾ, ಇದರಲ್ಲಿ ರಹಸ್ಯವೇನೂ ಇಲ್ಲ. ಆಯುಷ್ಯ ತೀರದವರನ್ನು

ಯಾವುದೂ ಕೊಲ್ಲಲಾರದು. ಆನೆ, ಹಾವು, ಕಲ್ಲು, ಬೆಂಕಿ, ನೀರುಗಳಲ್ಲಿಯೂ, ಪ್ರಪಂಚದ ಎಲ್ಲದರಲ್ಲಿಯೂ ನಿನ್ನಲ್ಲಿಯೂ, ನನ್ನಲ್ಲಿಯೂ ಇರುವವನು ಆ ವಿಷ್ಣುವೇ. ಈ ಸತ್ಯವನ್ನು ನೀನು ತಿಳಿದುಕೊಳ್ಳಲಿಲ್ಲ. ನನ್ನನ್ನು ಕೊಲ್ಲಬೇಕೆಂದು ನಿನಗೆ ತೋರುವುದೂ, ನಾನು ಸಾಯದಿರುವುದೂ ಆತನ ಲೀಲಾವಿಲಾಸವೇ! ಮತ್ತೇನಿಲ್ಲ ಅಪ್ಪಾ!" ಎಂದನು.

ಆ ಮಾತು ಕೇಳಿ ಹಿರಣ್ಯಕಶಿಪು ಕೋಪಾವೇಶದಿಂದ ಪ್ರಹ್ಲಾದನನ್ನು ದರದರ ಎಳೆದುಕೊಂಡು ಸಭಾಮಂಟಪದ ಮಧ್ಯದಲ್ಲಿ ನಿಲ್ಲಿಸಿ, ತನ್ನ ಗದೆಯನ್ನು ಹಿಡಿದನು. ಆ ದೃಶ್ಯವನ್ನು ನೋಡಿ ಲೀಲಾವತಿ ಮೂರ್ಛೆ ಹೋಗಿಬಿದ್ದಳು. ಸುತ್ತಲೂ ರಾಕ್ಷಸ ಪ್ರಮುಖರು ಬೊಂಬೆಗಳ ಹಾಗೆ ನಿಂತಿದ್ದರು.

ಸಭಾಮಂಟಪದ ಇದಿರಿನಲ್ಲಿ ಲೋಹದಿಂದ ನಿರ್ಮಿತವಾದ ದೊಡ್ಡದೊಂದು ಜಯಸ್ತಂಭವಿದ್ದಿತು. ಹಿರಣ್ಯಕಶಿಪು ಪ್ರಹ್ಲಾದನಿಗೆ ಆ ಜಯಸ್ತಂಭವನ್ನು ತೋರಿಸುತ್ತ "ಎಲೋ ಕುಲದ್ರೋಹಿ! ಅಗೋ, ಅದು ನನ್ನ ವಿಜಯಸ್ತಂಭ! ನನ್ನ ತಮ್ಮನನ್ನು ಕೊಂದ ವಿಷ್ಣುವಿನೊಂದಿಗೆ ಹೋರಾಡಿ ನಿನ್ನ ಎದುರಿನಲ್ಲೇ ಅವನನ್ನು ಸಂಹರಿಸಿ ನನ್ನ ಹಗೆ ತೀರಿಸಿಕೊಳ್ಳುತ್ತೇನೆ. ಆಗ ತಾನೇ ನೀನು ಅವನನ್ನು ಮರೆಯುವಿ! ಬರಲಿ ನನ್ನ ಮುಂದೆ ಆ ವಿಷ್ಣು! ಎಲ್ಲದರಲ್ಲೂ ಇರುವ ಅವನು ಆ ಕಂಬದಲ್ಲಿ ಇದ್ದಾನೋ? ಹೇಳು!" ಎಂದು ಕೇಳಿದನು.

"ಆ ಸಂದೇಹವೇ ಬೇಡ ಅಪ್ಪಾ. ಎಲ್ಲದರಲ್ಲೂ ಇರುವವನು ಆ ಕಂಬದಲ್ಲಿಯೂ ಇದ್ದಾನೆ" ಎಂದನು ಪ್ರಹ್ಲಾದ.

ಹಿರಣ್ಯಕಶಿಪು ಸರಸರನೆ ಹೋಗಿ ಗದೆಯಿಂದ ಆ ಕಂಬವನ್ನು ಹೊಡೆದನು. ಮರುಕ್ಷಣದಲ್ಲಿ ಪ್ರಳಯ ಭಯಂಕರ ಧ್ವನಿಯೊಂದು ಭೂಮಿ ಆಕಾಶಗಳ ಅಂತರಾಳದಲ್ಲಿ ಮೊಳಗಿತು. ಆ ಧ್ವನಿಯೊಂದಿಗೆ ಚರಾಚರಗಳೆಲ್ಲಾ ನಡುಗಿದುವು. ಕಂಬದಿಂದ ಹೊಗೆ ಹೊರಟು ಮೇಘ ಮಂಡಲದಲ್ಲಿ ಹರಡಿತು. ಮೇಘಗಳ ತುಣುಕುಗಳು ನಾಲ್ಕು ಸುತ್ತಲೂ ಬೀಳುತ್ತಿರಲು, ಸ್ತಂಭವು ಎರಡಾಗಿ ಸೀಳಿಕೊಂಡಿತು. ಅದರೊಳಗಿನಿಂದ ಹೊರಟ ಕಣ್ಣು ಕೋರೈಸುವ ಪ್ರಕಾಶದ ನಡುವೆ, ವಿಚಿತ್ರ ವಿಲಕ್ಷಣವಾದ ಆಕೃತಿಯೊಂದು ಹೊರಟಿತು. ಅದೇ ವಿಷ್ಣುವಿನ ದಶಾವತಾರಗಳಲ್ಲಿ ನಾಲ್ಕನೆಯದಾದ ನರಸಿಂಹಾವತಾರ. ಸಿಂಹದ ತಲೆಯೂ ಉಗುರುಗಳೂ, ಸೃಷ್ಟಿಯಲ್ಲಿಲ್ಲದ ರೂಪದಲ್ಲಿ ನರಸಿಂಹಮೂರ್ತಿ ಪ್ರಳಯ ಗರ್ಜನೆಯಿಂದ ಹೊರಗೆ ಹಾರಿದನು. ಆ ಗರ್ಜನೆ ಪಾಂಚಜನ್ಯ ಶಂಖ ಧ್ವನಿಯಂತೆ ಮೊಳಗಿತು. ಸುದರ್ಶನ ಚಕ್ರವು ನರಸಿಂಹನ ಸುತ್ತಲೂ ತಿರುಗುತ್ತಿದ್ದಿತು.





# ಕೋವಿದನಾದ ಕಳ್ಳ

ಅನೇಕ ವರ್ಷಗಳ ಹಿಂದೆ ರುಮೇನಿಯಾ ರಾಜಧಾನಿ ನಗರದಲ್ಲಿ ಒಬ್ಬ ಚೋರಶಿಖಾಮಣಿ ಇದ್ದನು. ಅವನು ಮಾಡುವ ಅದ್ಭುತ ಕಳ್ಳತನಗಳು ಬೆಕ್ಕು ನಾಚಿ ಕೊಳ್ಳುವಂತಹುದು. ಅವನು ಒಂದು ದಿನ ಎಲ್ಲಿಗೋ ಹೋಗುವಾಗ ದಾರಿಯಲ್ಲಿ ಇನ್ನೊಬ್ಬ ಕಳ್ಳನನ್ನು ಸಂಧಿಸಿದನು.

ಅವನು ಹಳ್ಳಿಯಲ್ಲಿ ತಕ್ಕಷ್ಟು ಸಂಪಾದನೆಯಿಲ್ಲದೆ, ಪಟ್ಟಣದಲ್ಲಿ ಸಂಪಾದಿಸಲು ಬಂದ ಸಂಗತಿ ಹೇಳುತ್ತ, ತನ್ನದು ಕಳ್ಳತನದ ವೃತ್ತಿ ಎಂತಲೂ ಹೇಳಿ ಬಿಟ್ಟನು ನಗುತ್ತ. ಇಬ್ಬರದೂ ಒಂದೇ ವೃತ್ತಿ ಎಂಬುದು ಆಗ ಇಬ್ಬರಿಗೂ ಗೊತ್ತಾಯಿತು.

ಪಟ್ಟಣದ ಕಳ್ಳ, ಹಳ್ಳಿಯ ಕಳ್ಳನೊಂದಿಗೆ, "ನಿನ್ನ ಜಾಣತನ ಎಷ್ಟೆಂದು ನೋಡಬೇಕು. ಅಕೋ. ಆ ಮರದ ಮೇಲಿನ ಕಾಗೆಯ ಗೂಡಿನಿಂದ, ಕಾಗೆಗೆ ತಿಳಿಯದಂತೆ ಅದರ ಮೊಟ್ಟೆಗಳನ್ನು ಕದ್ದು ತಾ ನೋಡೋಣ" ಎಂದನು.

ಹಳ್ಳಿಯ ಕಳ್ಳ ಮರ ಹತ್ತಿ, ಕಾಗೆಯ ಗೂಡು ಸೇರಿ, ಕಾವು ಕೊಡುತ್ತಿದ್ದ ಕಾಗೆಗೆ ತಿಳಿಯದಂತೆ, ಮೊಟ್ಟೆಗಳನ್ನೆತ್ತಿ ಜೇಬಿನಲ್ಲಿಟ್ಟುಕೊಂಡು ಮರದಿಂದ ಇಳಿದನು. ಆದರೆ ಜೇಬಿಗೆ ಕೈ ಹಾಕಿ ನೋಡಿದಾಗ ಮೊಟ್ಟೆಗಳಿರಲಿಲ್ಲ. ಪಟ್ಟಣದ ಕಳ್ಳ ಆ ಮೊಟ್ಟೆಗಳನ್ನು ತನ್ನ ಕೈಯಲ್ಲಿ ತೋರಿಸುತ್ತ, "ಪರವಾಗಿಲ್ಲ, ನೀನು ಕೋವಿದನಾದ ಕಳ್ಳನೇ ಸರಿ. ಕಳ್ಳತನದಲ್ಲಿ ನನಗೆ ಬಲ ತೋಳಾಗಿ ಇರುವೆಯಾದರೆ, ಸಿಗುವುದರಲ್ಲಿ ಸಮಪಾಲು ನಿನಗೆ. ಏನನ್ನುವಿ ?" ಎಂದನು. ಇದಕ್ಕೆ ಹಳ್ಳೀ ಕಳ್ಳ ಒಪ್ಪಿದನು.

ಆ ದಿನ ರಾತ್ರಿ ಇಬ್ಬರೂ ಕೂಡಿ, ಮಹಾರಾಜನ ಖಜಾನೆಯಲ್ಲಿ ಕಳವು ಮಾಡಲು ನಿಶ್ಚಯಿಸಿದರು. ಚೆನ್ನಾಗಿ ಕತ್ತಲೆ ಕವಿದ ಮೇಲೆ ಅವರು ಒಂದು ಬದಿಯಿಂದ ಭವನದ ಮೇಲೆ ಏರಿ, ಮಾಡಿಗೆ ಹೊದಿಸಿದ ಕನ್ನಡಿ ಕಿಟಕಿಯ ಮೂಲಕ, ಒಂದೊಂದು ಕೋಣೆಯನ್ನು ಪರೀಕ್ಷಿಸುತ್ತ, ಖಜಾನೆ ಯಾವುದೆಂಬು ದನ್ನು ತಿಳಿದುಕೊಂಡರು, ಅಲ್ಲಿ ಓಪಾಯಿಗಳಲ್ಲಿ ತುಂಬಾ ಬಂಗಾರದ ನಾಣ್ಯಗಳಿದ್ದುವು.

ದೊಡ್ಡ ಕಳ್ಳ, ಚಿಕ್ಕ ಕಳ್ಳನನ್ನು ಹಗ್ಗದ ಸಹಾಯ ದಲ್ಲಿ ಕನ್ನಡಿ ಕಿಟಕಿಯ ಮೂಲಕ ಖಜಾನೆಯ ಕೊಟಡಿಗೆ ಇಳಿಸಿದನು. ಚಿಕ್ಕ ಕಳ್ಳ ಚೀಲದ ತುಂಬಾ ಬಂಗಾರದ ನಾಣ್ಯಗಳನ್ನು ತುಂಬಿಸಿಕೊಂಡು, ಇಳಿದ



ಹಾಗೆಯೇ ಮೇಲಕ್ಕೇರಿ ಬಂದನು. ಆಮೇಲೆ ಇಬ್ಬರೂ ತಮ್ಮ ಮನೆಗೆ ಹೊರಟು ಹೋದರು.

ಮರುದಿನ ಮಧ್ಯಾಹ್ನದ ಮೇಲೆ ಮಹಾರಾಜನು ಎಂದಿನಂತೆ ತನ್ನ ಖಜಾನೆಯನ್ನು ನೋಡಲು ಬಂದು "ಈ ಕೋಣೆಯೊಳಗೆ ಯಾರು ಬಂದರು ?" ಎಂದು ಕಾವಲಿನವರನ್ನು ಕೇಳಿದನು.

"ಯಾರೂ ಬರಲಿಲ್ಲ ಮಹಾರಾಜಾ" ಎಂದರು ಕಾವಲಿನವರು.

ರಾಜನು ಖಜಾನೆಯಿಂದ ಕಾರಾಗೃಹಕ್ಕೆ ಹೋಗಿ ಅಲ್ಲಿ ಖೈದಿಯಾಗಿರುವ ಒಬ್ಬ ಮುದುಕ ಕಳ್ಳನನ್ನು ನೋಡಿ, "ಯಾರೋ ಹೇಗೋ ಖಜಾನೆಯೊಳಗೆ ಪ್ರವೇಶಿಸಿ ಎರಡು ಸಾವಿರ ಬಂಗಾರದ ನಾಣ್ಯಗಳನ್ನು ಎತ್ತಿಕೊಂಡು ಹೋಗಿದ್ದಾರೆ. ಗೋಡೆಯಲ್ಲೆಲ್ಲಿಯೂ ಕನ್ನದ ಗುರುತೇ ಇಲ್ಲ. ನಿನಗೇನು ತೋರುತ್ತದೆ ?" ಎಂದು ಕೇಳಿದನು.

"ಕನ್ನವು ಇದ್ದೇ ಇರಬೇಕು, ಮಹಾರಾಜರೇ ನೀವು ಕಂಡುಹಿಡಿಯಲಿಲ್ಲ ಅಷ್ಟೇ. ಖಜಾನೆಯ ಕೋಣೆಯಲ್ಲಿ ಹೊಗೆ ತುಂಬಿಸಿರಿ. ಹೊಗೆ ಎಲ್ಲಿ ಹೊರಗೆ ಬರುತ್ತದೋ ಅಲ್ಲಿ ಗಮನಿಸಿರಿ. ಕನ್ನವಿರುವುದೋ ಇಲ್ಲವೋ ಗೊತ್ತಾಗಿಬಿಡುತ್ತದೆ" ಎಂದನು ಖೈದಿನಲ್ಲಿದ್ದ ಕಳ್ಳ.

ರಾಜನು ಹಾಗೆಯೇ ಹೊಗೆ ಹಾಕಿಸಿದನು. ಮೇಲ್ಭಾಗದ ಛಾವಣಿಯ ಕನ್ನಡಿಯ ಎಡೆಯಿಂದಾಗಿ ಹೊಗೆ ಹೊರಗೆ ಹೋಯಿತು. ರಾಜನು ಈ ಸಂಗತಿಯನ್ನು ಸೆರೆಮನೆಯಲ್ಲಿರುವ ಮುದಿ ಕಳ್ಳನೊಂದಿಗೆ ಹೇಳಿದನು.

"ಹಾಗಾದರೆ ಆ ಕಳ್ಳ ಮತ್ತೆ ಬಂದೇ ಬರುತ್ತಾನೆ. ಆ ಹೊದಿಕೆಯ ಕನ್ನಡಿಯನ್ನು ಮತ್ತೆ ಬಿಗಿಪಡಿಸದೆ ಹಾಗೇ ಬಿಟ್ಟುಬಿಡಿ, ಅದಕ್ಕೆ ನೇರಾಗಿ ಕೆಳ ಭಾಗದ ನೆಲದಲ್ಲಿ ಪೀಪಾಯಿ ತುಂಬಾ ಗಟ್ಟಿಯಾದ ಬೆಲ್ಲದ ಪಾಕವನ್ನು ಹಾಕಿಡಿ, ಕಳ್ಳ ನೇರಾಗಿ ಅದರೊಳಗೇ ಇಳಿದು ನಿಮಗೆ ಸಿಕ್ಕಿಬಿಡುತ್ತಾನೆ" ಎಂದನು ಮುದುಕ ಕಳ್ಳ.

ಅವನ ಮಾತು ಹುಸಿಹೋಗಲಿಲ್ಲ. ಕಳ್ಳರಿಬ್ಬರೂ ಪರಸ್ಪರ ಮಾತಾಡಿಕೊಂಡು "ಆ ಖಜಾನೆಯಲ್ಲಿ ಇನ್ನೂ ಬಹಳ ಬಂಗಾರದ ನಾಣ್ಯಗಳಿವೆ. ರಾಜನಿಗೆ ಕಳ್ಳತನ ಗೊತ್ತಾಗುವುದರೊಳಗೆ ನಾವು ಇನ್ನಷ್ಟು ಕದ್ದು ತಂದುಬಿಡುವುದೇ ಒಳ್ಳೆಯದು" ಎಂದುಕೊಂಡು ಮರುದಿನ ರಾತ್ರಿ ಮತ್ತೆ ಖಜಾನೆಯ ಕಳ್ಳತನಕ್ಕೆ ಬಂದೇ ಬಂದರು.

ಹಳ್ಳಿಯ ಕಳ್ಳ ಹಗ್ಗದ ಸಹಾಯದಿಂದ ಸರಸರನೆ ಕೆಳಗಿಳಿದು ಬೆಲ್ಲದ ಪಾಕದ ಪೀಪಾಯಲ್ಲಿ ಸಿಕ್ಕಿಕೊಂಡನು.

"ಅಣ್ಣಾ ! ಮೋಸವಾಯಿತು. ನಾನು ಅಲುಗಾಡದ ಹಾಗೆ ಯಾವುದೋ ಅಂಟಿನೊಳಗೆ ಸಿಕ್ಕಿಕೊಂಡೆನು. ನನ್ನನ್ನು ಮೇಲೆ ಎಳೆಯುವುದು ಸಾಧ್ಯವಿಲ್ಲ. ಇಷ್ಟು

ವಿಷ ತಂದು ನನ್ನ ಬಾಯಿಗೆ ಹಾಕಿ ನೀನು ಹೋಗಿ ಬಿಡು" ಎಂದನು ಹಳ್ಳಿಯ ಕಳ್ಳ.

"ಹೆದರಬೇಡ ತಮ್ಮಾ. ನನ್ನ ಹತ್ತಿರ ಸತ್ತಹಾಗೆ ಮಾಡುವಂಥ ಒಂದು ಮದ್ದು ಇದೆ. ಅದನ್ನು ನುಂಗು. ನಾಳೆ ನಾನು ಬಂದು ನಿನ್ನನ್ನು ಬಿಡಿಸಿಕೊಳ್ಳುತ್ತೇನೆ." ಎಂದು ದೊಡ್ಡ ಕಳ್ಳ ಅದೇ ಹಗ್ಗದ ಮೂಲಕ ಕೆಳಗಿಳಿದು ಬಂದು, ಹಳ್ಳಿಯ ಕಳ್ಳನ ಬಾಯಿಗೆ ಏನೋ ಹಾಕಿ ಹಗ್ಗದಲ್ಲಿ ಏರಿ ಹೊರಟುಹೋದನು.

ಮರುದಿನ ಬೆಳಿಗ್ಗೆ ರಾಜನು ಖಜಾನೆಯೊಳಗೆ ಬಂದು, ಪೀಪಾಯಿಯಲ್ಲಿ ಸಿಕ್ಕಿಕೊಂಡ ಕಳ್ಳನನ್ನು ನೋಡಿ, "ಆಹಾಂ! ಸಿಕ್ಕಿದೆಯಾ ಕಳ್ಳಾ! ನಿನಗೆ ಮಾಡುತ್ತೇನೆ ಶಾಸ್ತಿ!" ಎಂದು ಭಟರನ್ನು ಕರೆದನು. ಅವನು ಸತ್ತು ಹೋಗಿರುವುದನ್ನು ನೋಡಿದ ಕೂಡಲೇ ರಾಜನ ಉತ್ಸಾಹ ಇಳಿದುಹೋಯಿತು. ಅವನು ಕಾರಾಗೃಹಕ್ಕೆ ಹೋಗಿ ಮುದಿ ಕಳ್ಳನೊಂದಿಗೆ ಈ ಸಂಗತಿಯನ್ನು ಹೇಳಿದನು.

"ರಾಜಾ! ಇವರಾರೋ ಬುದ್ಧಿವಂತ ಕಳ್ಳರ ಹಾಗಿದ್ದಾರೆ" ಎಂದನು ಮುದುಕ ಕಳ್ಳ.

"ಕಳ್ಳರಾ! ಇವನಲ್ಲದೆ ಇನ್ನೊಬ್ಬನಿದ್ದಾನೇನು?" ಎಂದು ರಾಜನು ಬೆರಗಾದನು.

"ಇನ್ನೊಬ್ಬನಿಲ್ಲದಿದ್ದರೆ ಇವನು ಹೇಗೆ ಸಾಯುತ್ತಾನೆ? ಆತ್ಮಹತ್ಯ ಮಾಡಿಕೊಳ್ಳಲು ಸಾಧ್ಯವಿಲ್ಲವಷ್ಟೆ? ಬೆಲ್ಲದ ಪಾಕದಲ್ಲಿ ಎದೆಯವರೆಗೆ ಹೂತು ಹೋದ ಮಾತ್ರಕ್ಕೆ ಪ್ರಾಣ ಹೋಗಲಾರದಷ್ಟೆ? ಆದರೂ ಆ ಎರಡನೆಯವನನ್ನು ಹಿಡಿಯಲು ಒಂದು ದಾರಿಯಿದೆ. ಇವನ ಶವಕ್ಕಾಗಿ ಅವನು ತಪ್ಪದೆ ಬರುತ್ತಾನೆ. ನಗರದ್ವಾರದ ಹೊರಗೆ ಇವನ ಶವವನ್ನು ಒಂದು ಕುರ್ಚಿಯಲ್ಲಿ ಕೂಡಿಸಿಟ್ಟು ಭಟರ ಕಾವಲನ್ನಿರಿಸಿರಿ." ಎಂದನು ಮುದುಕ ಕಳ್ಳ.

ಆ ಮುದಿ ಕಳ್ಳ ಹೇಳಿದ ಹಾಗೆಯೇ ದೊಡ್ಡ ಕಳ್ಳನು ತನ್ನ ಮಿತ್ರನನ್ನು ಕಾಪಾಡುವ ಪ್ರಯತ್ನವನ್ನು



ಪ್ರಾರಂಭಿಸಿದನು. ಅವನು ಒಂದು ಬಿಳಿಯ ಕುದುರೆ ಕಟ್ಟಿದ ಗಾಡಿಯನ್ನೂ ನಾಲ್ಕು ಸಾರಾಯಿ ತುಂಬಿದ ಜಾಡಿಗಳನ್ನೂ ಕೊಂಡುಕೊಂಡು, ತಾನೊಬ್ಬ ವೃದ್ಧನ ವೇಷದಲ್ಲಿ ಸಾರಾಯಿ ಗಾಡಿಯೊಂದಿಗೆ ನಗರ ದ್ವಾರಕ್ಕೆ ಐವತ್ತು ಗಜ ದೂರದವರೆಗೆ ಬಂದು, ಗಾಡಿಯನ್ನು ಪಕ್ಕಕ್ಕೆ ಹೊರಳಿಸಿ ಹಾಕಿ "ಅಯ್ಯಯ್ಯೋ! ಗಾಡಿ ಬಿದ್ದುಹೋಯಿತೋ! ಸಾರಾಯಿ ಜಾಡೀ ಉರುಳತ್ತದಲ್ಲಾ! ಬನ್ನಿರೋ! ರಕ್ಷಿಸಿರೋ!" ಎಂದು ಗಟ್ಟಿಯಾಗಿ ಕೂಗಿದನು.

ಹಳ್ಳಿಯ ಕಳ್ಳನಿಗೆ ಕಾವಲಾಗಿದ್ದ ಭಟರು, "ಎಲೋ ಮುದುಕಾ! ಸುಮ್ಮನೆ ಬೊಬ್ಬೆ ಹೊಡೆದ ಮಾತ್ರಕ್ಕೆ ಯಾರಿಗೇನು ಲಾಭವಾಗುತ್ತೆ? ನಮಗೆ ಒಂದು ಜಾಡೀ ಸಾರಾಯಿ ಕೊಡುವಿಯಾದರೆ, ಗಾಡಿ ಸರಿಮಾಡಿಡುತ್ತೇವೆ" ಎಂದರು.

"ಭೇಷಾಗಿ ತಗೊಳ್ಳೀ ಅಪ್ಪಗಳಿರಾ! ಬೇಗ ಬನ್ನಿ! ಕುದುರೇನ ಮೊದಲು ಉಳಿಸಿ" ಎಂದನು ದೊಡ್ಡ ಕಳ್ಳ.



ಭಟರು ಕುದುರೆಯನ್ನು ಗಾಡಿಯಿಂದ ಬೇರ್ಪಡಿಸಿ, ಗಾಡಿಯನ್ನು ಎತ್ತಿ ನಿಲ್ಲಿಸಿ, ಒಂದು ಜಾಡಿಯ ಸಾರಾಯಿಯನ್ನು ಸರದಿ ಪ್ರಕಾರ ಕುಡಿಯ ತೊಡಗಿದರು. ಕಳ್ಳನು ಆ ಸಾರಾಯಿಯಲ್ಲಿ ನಿದ್ದೆಯ ಮದ್ದು ಬೆರೆಸಿದ ಸಂಗತಿ ಅವರಿಗೆ ತಿಳಿಯದು. ಭಟರಿಗೆ ನಿದ್ದೆಯ ಮಂಪರು ಕವಿಯುವ ಸಮಯ ದಲ್ಲಿ, ದೊಡ್ಡ ಕಳ್ಳನು ಹಳ್ಳಿ ಕಳ್ಳನನ್ನು ತೋರಿಸಿ, "ಸರದಾರರೇ! ಇವನು ಯಾರು?" ಎಂದು ಪ್ರಶ್ನೆ ಮಾಡಿದನು.

"ಇವನೊಬ್ಬ ಕಳ್ಳ ಬಿಡಯ್ಯಾ !" ಎಂದನು ಭಟರ ಸರದಾರ.

"ಅಯ್ಯಯ್ಯೋ ! ಕಳ್ಳನೋ ! ಇವನು ನನ್ನ ಕುದುರೇನ ಹಾರಿಸಿಕೊಂಡು ಹೋಗುತ್ತಾನೇನೋ !" ಎಂದು ಕೂಗಿದನು ದೊಡ್ಡಕಳ್ಳ.

"ಎಲೋ ಮುದುಕಾ ! ನಿನಗೆ ಬುದ್ಧಿಯಿಲ್ಲ ! ಇವನು ಸತ್ತ ಹೆಣ, ಕಾಣೋದಿಲ್ಲೇನು ?" ಎಂದನು ಸರದಾರ. "ಹೇಗೆ ಹೇಳೋದು ! ಅವನು ಖಂಡಿತ ನನ್ನ ಕುದುರೇನ ಕದಿಯದೇ ಬಿಡೋದಿಲ್ಲ. ಕಳ್ಳನನ್ನು ಸತ್ತರೂ ನಂಬಕೂಡದು" ಎಂದನು ದೊಡ್ಡ ಕಳ್ಳ.

"ಬಾಯಿ ಮುಚ್ಕೋ ಮುದಿ ಹುಚ್ಚಾ ! ಅವನು ಕುದುರೇನ ಕದ್ದುಕೊಂಡರೆ ನಾನು ಆ ಕುದುರೆಯ ಬೆಲೆ ಕೊಡುತ್ತೇನೆ. ಸುಮ್ಮನಿರು !" ಎಂದನು ಸರದಾರ.

ತರುವಾಯ ಆ ಭಟರು ಒಬ್ಬೊಬ್ಬರೇ ನಿದ್ದೆಯ ಮತ್ತಿನಿಂದ ಮೈಮರೆತು ಬಿದ್ದುಕೊಂಡರು. ಕೂಡಲೇ ದೊಡ್ಡ ಕಳ್ಳ ಹಳ್ಳಿಯ ಕಳ್ಳನ ಬಳಿಗೆ ಬಂದು ಅವನ ಬಾಯಿಯೊಳಗೆ ಏನೋ ಒಂದು ದ್ರಾವಕವನ್ನು ಸುರಿದನು. ಸ್ವಲ್ಪ ಹೊತ್ತಿಗೆ ಹಳ್ಳಿಯ ಕಳ್ಳ ಕದಲುತ್ತ ಕಣ್ಣು ತೆರೆದನು.

"ನೋಡು ತಮ್ಮಾ, ಇವರೆಲ್ಲ ಬಹಳ ಹೊತ್ತು ನಿದ್ದೆಯಲ್ಲಿ ಬಿದ್ದಿರಲಾರರು. ನೀನು ಕುದುರೆಯನ್ನು ಹತ್ತಿ ನಮ್ಮ ಜಾಗೆಗೆ ಹೋಗಿಬಿಡು. ಬೆಳಗಾದ ಮೇಲೆ ನಾನು ಬಂದು ನಿನ್ನನ್ನು ಕೂಡುತ್ತೇನೆ" ಎಂದನು.

ಅದರಂತೆ ಹಳ್ಳಿಯ ಕಳ್ಳ ಕುದುರೆಯನ್ನೇರಿ ಹೊರಟು ಹೋದಮೇಲೆ, ದೊಡ್ಡ ಕಳ್ಳ ತನ್ನ ಮೊದಲಿನ ಜಾಗದಲ್ಲಿ ಹೋಗಿ ಬಿದ್ದುಕೊಂಡು, ನಿದ್ದೆ ಮಾಡುವವನ ಹಾಗೆ ನಟಿಸಿಕೊಂಡಿದ್ದನು.

ಸ್ವಲ್ಪ ಹೊತ್ತಾದ ಮೇಲೆ ಭಟರು ಒಬ್ಬೊಬ್ಬರಿಗೆ ಎಚ್ಚರ ಬಂದಿತು. ಸತ್ತುಹೋದ ಕಳ್ಳನೂ ಕಾಣುವು ದಿಲ್ಲ. ಕುದುರೆಯೂ ಮಾಯವಾಗಿತ್ತು. ಕಾವಲಿ ನವರು ಅದನ್ನು ನೋಡಿ ಬೆಚ್ಚಿ ಬಿದ್ದರು. ಸರದಾರನು ಕಣ್ಣು ತೆರೆದು ನಾಲ್ಕು ಸುತ್ತಲೂ ನೋಡಿ, "ಆ ಮುದುಕ ಹೇಗೆ ಹೇಳಿದನೋ ಹಾಗೇ ಆಯಿತಲ್ಲಾ!" ಎಂದನು.

ಅವನು ಎದ್ದು ಬಂದು ನಿದ್ದೆಯಲ್ಲಿರುವಂತೆ ನಟಿಸಿ ಕೊಂಡಿದ್ದ ದೊಡ್ಡ ಕಳ್ಳನನ್ನು ಎಬ್ಬಿಸಿ, "ಏನಯ್ಯಾ

ಇದೆಲ್ಲಾ ಮುದುಕಾ! ನನಗೊಂದೂ ತೋರುವುದಿಲ್ಲ. ನೀನು ಹೇಗೆ ಹೇಳಿದೆಯೋ ಹಾಗೆಯೇ ಆಯಿತು. ಕಳ್ಳನೂ ಇಲ್ಲ. ನಿನ್ನ ಕುದುರೆಯೂ ಇಲ್ಲ. ಮಹಾರಾಜರಿಗೆ ಇಲ್ಲಿ ನಡೆದದ್ದೆಲ್ಲ ತಿಳಿದುಬಿಟ್ಟರೆ ನಮ್ಮ ಚರ್ಮ ಸುಲಿಯುತ್ತಾರೆ. ನಿನ್ನ ಕುದುರೆಗೆ ಎರಡು ಪಾಲು ಬೆಲೆ ಕೊಡುತ್ತೇವೆ. ಇಲ್ಲಿ ನಡೆದದ್ದು ಯಾವುದನ್ನೂ ಹೇಳಬೇಡಯ್ಯಾ" ಎಂದು ಅಂಗಲಾಚಿ ಕೇಳಿಕೊಂಡನು.

ದೊಡ್ಡಕಳ್ಳ ತಾನು ಬಂದ ಕೆಲಸವನ್ನು ಜಯಪ್ರದವಾಗಿ ನಡೆಯಿಸಿದ್ದು ಮಾತ್ರವಲ್ಲದೆ, ಐನೂರು ನಾಣ್ಯಗಳನ್ನು ಕೂಡಾ ಸಂಪಾದಿಸಿಕೊಂಡು ಹೊರಟು ಹೋದನು.

ಇಲ್ಲಿ ನಡೆದ ಸಂಗತಿ ಕಡೆಗೆ ರಾಜನಿಗೆ ತಿಳಿಯಿತು. ರಾಜನು ಆ ಸಂಗತಿಯನ್ನು ಸೆರೆಮನೆಯಲ್ಲಿರುವ ಮುದುಕ ಕಳ್ಳನೊಡನೆ ಹೇಳಿದನು. "ಅವನು ಯಾರೋ ಕಳ್ಳತನದಲ್ಲಿ ಮಹಾ ಕೋವಿದನೇ ಆಗಿದ್ದಾನೆ. ದೊಡ್ಡದೊಂದು ಬಹುಮಾನದ ಮೊತ್ತವನ್ನು ಪ್ರಕಟ ಪಡಿಸಿದರೆ ಅವನು ಬಹಿರಂಗಕ್ಕೆ ಬರಬಹುದು" ಎಂದ ಮುದಿ ಕಳ್ಳ.

ಇಷ್ಟು ಹೊತ್ತಿಗೆ ರಾಜನಿಗೆ ಕೂಡಾ ಆ ಕಳ್ಳನ ಮೇಲೆ ಮೆಚ್ಚುಗೆಯ ಆದರ ಭಾವ ಹುಟ್ಟುತ್ತ ಬಂದಿತ್ತು.

ಅವನು ಕೋವಿದನಾದ ಆ ಕಳ್ಳನಿಗೆ ಧೊಡ್ಡ ಬಹುಮಾನ ಕೊಡುವುದಾಗಿ ಪ್ರಕಟಪಡಿಸಿದನು.

ಮರುದಿನವೇ ದೊಡ್ಡ ಕಳ್ಳನು ಮಹಾರಾಜನ ಇದಿರಿಗೆ ಬಂದು, "ಮಹಾರಾಜಾ, ನಾನೇ ನೀವು ಹುಡುಕುವ ದೊಡ್ಡ ಕಳ್ಳ. ತಾವು ಪ್ರಕಟಿಸಿದ ಬಹುಮಾನವನ್ನು ನಂಬಿಕೊಂಡು ಪಡೆದುಕೊಳ್ಳಲಿಕ್ಕಾಗಿಯೇ ಬಂದೆನು" ಎಂದನು.

"ನೀನೇ ಅವನೆಂದು ನಾನು ಹೇಗೆ ನಂಬುವುದು?" ಎಂದು ರಾಜನು ಕೇಳಿದನು.

ಕಳ್ಳನು ದೂರದಲ್ಲಿ ಒಂದು ಎತ್ತನ್ನು ಹೊಡೆದುಕೊಂಡು ಹೋಗುವ ಒಬ್ಬನನ್ನು ತೋರಿಸಿ, "ಆ ಎತ್ತನ್ನು ಕದ್ದುಕೊಂಡು ಬಂದರೆ ನಂಬುವಿರಾ?" ಎಂದು ಕೇಳಿದನು. ಆ ಎತ್ತನ್ನು ನಡೆಸಿಕೊಂಡು ಹೋಗುವವನು ಹಳ್ಳಿಯ ಕಳ್ಳನೇ!

ರಾಜನು ಆಗಬಹುದೆನ್ನಲು, ದೊಡ್ಡಕಳ್ಳನು ಆ ಎತ್ತಿನವನ ಬಳಿಗೆ ಹೋಗಿ ಅವನೊಂದಿಗೆ ಏನೋ ಹೇಳುವುದನ್ನೂ, ಅದನ್ನು ಕೇಳಿ ಎತ್ತಿನವನು ಬಾಯಿ ಬಡೆದು ತಲೆ ಕೆರೆದು, ಹಣ್ಣೆ ಚಚ್ಚಿಕೊಂಡು ಓಡಿ ಹೋಗುವುದನ್ನೂ ನೋಡಿ ರಾಜನಿಗೆ ತೃಪ್ತಿಯಾಯಿತು. ದೊಡ್ಡ ಕಳ್ಳನಿಗೆ ರಾಜನು ದೊಡ್ಡ ಬಹುಮಾನವನ್ನು ಕೊಟ್ಟು ಕಳುಹಿಸಿದನು. ಅದನ್ನು ಹಂಚಿಕೊಂಡು ಇಬ್ಬರು ಕಳ್ಳರೂ ಸುಖವಾಗಿದ್ದರು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೫೦

**ಗೆದ್ದ ಶೀರ್ಷಿಕೆಗಳು ೧೯೮೩ ಆಗಸ್ಟ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.**



Chandrapal Singh



Chandrapal Singh

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಜೂನ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟ್‌ಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

## ಏಪ್ರಿಲ್ ಸ್ಪರ್ಧೆಯ ಫಲಿತಾಂಶ :

**ಮೊದಲನೇ ಫೋಟೋ :** ವಾಹನ ಹಾರಿದ ಹಾಗೆ ವಾಹಕ ಹಾರುತ್ತಾನೇನು ?

**ಎರಡನೇ ಫೋಟೋ :** ನೋಡಿರಿ, ವಾಹನನಿಗಿಂತ ಮೇಲೆ ಈ ವಾಹಕ ಹಾರುತ್ತಾನೆ!

ಕಳುಹಿಸಿದವರು : ಎಲ್. ಬೃಂದಾ, ಟ್ರಿಪ್ಲಿಕೇನ್, ಮದ್ರಾಸು-೫.

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




ನೂರಾರು ವರ್ಷಗಳ ಹಿಂದೆ ಅವಂತೀ ನಗರದಲ್ಲಿ ಒಬ್ಬ ಮುದುಕನಾದ ವರ್ತಕನಿದ್ದನು. ಅವನು ಪ್ರಾಯ ಸಮರ್ಥನಾಗಿದ್ದ ಕಾಲದಲ್ಲಿ ಖಂಡಾಂತರ ದೊಳಗಿನ ಅನೇಕ ದೇಶಗಳನ್ನು ತಿರುಗಿ, ಸಮುದ್ರ ವ್ಯಾಪಾರದಿಂದ ಹೇರಳ ಧನವನ್ನು ಸಂಪಾದಿಸಿದ್ದನು. ಕಾಲಕ್ರಮದಲ್ಲಿ ವಯಸ್ಸಿಗೆ ಅನುಗುಣವಾಗಿ ಶಕ್ತಿ ಕಡಿಮೆಯಾಯಿತು. ತಾನು ಇನ್ನು ಹೆಚ್ಚು ಶ್ರಮ ಪಡಲು ಸಾಧ್ಯವಿಲ್ಲವೆನಿಸಿತು.

ಅವನು ತನ್ನ ವ್ಯಾಪಾರ ವೃತ್ತಿಯನ್ನು ಮಕ್ಕಳ ಮೇಲೆ ಸರಿಸಬೇಕೆಂದು ಪ್ರಯತ್ನಿಸಿದನು. ಆದರೆ ಆವನ ಮೂವರು ಕುಮಾರರಲ್ಲಿ ದೊಡ್ಡವರಾಗಿರುವ ಜೀವದತ್ತ ಮತ್ತು ಲಕ್ಷದತ್ತರು ಕೇವಲ ಹೊಣೆ ಗೇಡಿಗಳಾಗಿದ್ದರು. ಅವರಿಬ್ಬರು ಯಾವುದಕ್ಕೂ ಉಪಯೋಗವಿಲ್ಲದ ಪೋಲಿಗಳು.

ಹೆಸರಿಗಷ್ಟೇ ಹಿರಿಯ ಮಕ್ಕಳಾಗಿರುವ ಜೀವದತ್ತ ಲಕ್ಷದತ್ತರು ಮನೆಯಲ್ಲಿಯ ಯಾವ ಆಗು ಹೋಗು ಗಳಿಗೂ ಮನೆಯಲ್ಲಿರುತ್ತಿರಲಿಲ್ಲ. ಕೆಟ್ಟ ಅಭ್ಯಾಸ ಗಳನ್ನು ಹಿಡಿದು ಎಲ್ಲೆಲ್ಲೋ ತಿರುಗಿಕೊಂಡಿರುವವರು. ಮೂರನೆಯವನಾದ ಪಿಂಗಳನಿಗೆ ಮಾತ್ರ ಇನ್ನೂ ಇಪ್ಪತ್ತು ವರ್ಷ ಕೂಡ ತುಂಬಿರದಿದ್ದರೂ, ಒಳ್ಳೆಯ ತನದಲ್ಲಿ ಮನೆಯಲ್ಲಿ ತಂದೆ ತಾಯಿಗಳಿಗೆ ವಿಧೇಯ ನಾಗಿರುವನು. ಆದರೆ ದೊಡ್ಡ ವ್ಯಾಪಾರ ವ್ಯವಹಾರ ಗಳ ಹೊರೆಯನ್ನು ತಾಳಿಕೊಳ್ಳಲು ಅವನಿಗೆ ಇನ್ನೂ ವಯಸ್ಸಾಗಬೇಕಿತ್ತು.

ಈ ಚಿಂತೆಯಿಂದ ಮುದುಕ ವರ್ತಕನು ಹಾಸಿಗೆ ಹಿಡಿದನು. ಒಂದು ಬಗೆಯ ನಿರಾಶೆಯ ವೈರಾಗ್ಯ ಅವನನ್ನು ಆವರಿಸಿ, ತನ್ನ ಯಾವತ್ತೂ ಆಸ್ತಿಯನ್ನು ಮೂವರು ಮಗಂದಿರಿಗೂ, ಹೆಂಡತಿಗೂ ಸಮನಾಗಿ ಹಂಚಿ ಕೊಟ್ಟುಬಿಟ್ಟನು. ಆ ಮೇಲೆ ಒಂದು ದಿನ ಆವನು ತೀರಿಹೋದನು.

ತಂದೆ ತೀರಿಹೋದ ಕೂಡಲೇ ದೊಡ್ಡವರಾದ ಜೀವದತ್ತ, ಲಕ್ಷದತ್ತರು ತಮ್ಮ ಪಾಲಿಗೆ ಬಂದ ಆಸ್ತಿಯನ್ನು ಸ್ವೇಚ್ಛೆಯಾಗಿ ಖರ್ಚು ಮಾಡ ತೊಡಗಿದರು. ತನ್ನ ದೊಡ್ಡ ಮಗಂದಿರಿಬ್ಬರೂ



ಅಪ್ರಯೋಜಕರೆಂದು ತಿಳಿದು ತಾಯಿ, ತನ್ನ ಪಾಲಿಗೆ ಬಂದ ಆಸ್ತಿಯೊಂದಿಗೆ ಚಿಕ್ಕಮಗನಾದ ಪಿಂಗಳನ ಮನೆಗೆ ಹೋಗಿ, ಅವನೊಂದಿಗೆ ವಾಸಿಸಲು ತೊಡಗಿದಳು.

ಜೀವದತ್ತ, ಲಕ್ಷದತ್ತರು ಸುಮ್ಮನೆ ಖರ್ಚು ಮಾಡುತ್ತಾ ಇದ್ದರೆ ಎಷ್ಟು ಕಾಲ ನಡೆದೀತು? ಹಣವೆಲ್ಲ ಬೇಗನೆ ಕರಗಿಹೋದ ಕೂಡಲೇ, ತಾಯಿಯನ್ನು ನೆನೆದುಕೊಂಡು ಪಿಂಗಳನ ಮನೆಗೆ ಬಂದರು. ಅಪೂರ್ವವಾಗಿ ಬಂದ ಅಣ್ಣಂದಿರನ್ನು ಪಿಂಗಳನು ಬಹಳ ಆದರದಿಂದ ಬರಮಾಡಿಕೊಂಡನು. ಆದರೆ ಅವರಿಬ್ಬರೂ ಅವನ ಆದರವನ್ನು ಅಲಕ್ಷ್ಯಮಾಡಿ, ಬದಿಗೆ ದೂಡಿ, ಸೀದಾ ಒಳಗೆ ತಾಯಿಯ ಹತ್ತಿರ ಹೋಗಿ ಆಕೆಯನ್ನು ತಮ್ಮ ಮನೆಗೆ ಬಂದು ಇರಬೇಕೆಂದು ಕರೆದರು.

ಆದರೆ ತಾಯಿಗೆ ತನ್ನ ದೊಡ್ಡ ಮಕ್ಕಳ ಸ್ವಭಾವ ಗೊತ್ತೇ ಇದ್ದಿತು. ತನ್ನ ಮೇಲೆ ಅವರಿಗೆ ಪ್ರೀತಿಯೋ ಗೌರವವೋ ಸ್ವಲ್ಪವೂ ಇಲ್ಲ. ಅವರು ತನ್ನನ್ನು ಅವರ ಮನೆಗೆ ಬಂದಿರಲು ಕರೆಯುವುದರ ರಹಸ್ಯವೇನೆಂಬುದೂ ಅವಳಿಗೆ ಗೊತ್ತು. ತನ್ನ ಗಂಡನು ತನಗೆ ಕೊಟ್ಟ ಧನಕ್ಕಾಗಿಯೇ ಈ ಬಗೆಯ ಆದರವನ್ನು ನಟಿಸುತ್ತಿದ್ದಾರೆ. ಆದರೂ ಅವಳು ಒಳ್ಳೆಯತನದಲ್ಲೇ ಅವರೊಂದಿಗೆ ಮಾತಾಡುತ್ತಾ, "ಅಪ್ಪಗಳಿರಾ, ನೀವಿಬ್ಬರೂ ದೊಡ್ಡವರು. ನಿಮ್ಮ ಜೀವಿತವನ್ನು ಹೇಗೆ ರೂಪಿಸಿಕೊಳ್ಳಬೇಕೆಂಬುದೆಲ್ಲಾ ನಿಮಗೆ ತಿಳಿದಿದೆ. ಆದರೆ ಪಿಂಗಳನು ನಿಮ್ಮ ಹಾಗಲ್ಲ. ಇನ್ನೂ ಹುಡುಗಾಟದ ವಯಸ್ಸು. ಆದುದರಿಂದ ನಾನು ಅವನ ಹತ್ತಿರ ಇರುವುದೇ ಎಲ್ಲದಕ್ಕೂ ಒಳ್ಳೆಯದು. ಸುಖವೋ ಕಷ್ಟವೋ, ನನಗೆ ಇಲ್ಲೇ ಹಿಡಿಸಿಹೋಯಿತು. ಸುಮ್ಮನೆ ಒತ್ತಾಯ ಮಾಡಬೇಡಿ" ಎಂದಳು.

ಅದಕ್ಕೆ ಹಿರಿಯರಿಬ್ಬರೂ ರೇಗಿಕೊಂಡು, "ಹಾಗಿದ್ದರೆ ನೀನು ಅವನ ಹತ್ತಿರವೇ ಇರು. ನಾವೇಕೆ ಬೇಡವೆನ್ನುವೆವು? ಆದರೆ ನಮ್ಮ ತಂದೆ ನಿನ್ನ ಹೆಸರಿನಲ್ಲಿ ಇಟ್ಟಿರುವ ಆಸ್ತಿಯಲ್ಲಿ ನಮಗೆ ಭಾಗವಿದೆಯಷ್ಟೇ! ಆ ನಮ್ಮ ಭಾಗವನ್ನು ನಮಗೆ ಕೊಟ್ಟುಬಿಡು. ಅಷ್ಟಾದರೂ ಮಾಡು." ಎಂದರು.

"ನಾನು ಬದುಕಿರುವಾಗ ಅದರಲ್ಲಿ ನಿಮಗೆ ಪಾಲು ಹೇಗೆ ಬಂದೀತು?" ಎಂದಳು ತಾಯಿ ಆಶ್ಚರ್ಯದಿಂದ.

"ಆ ಭಾಗವನ್ನು ಈಗ ನೀನು ಕೊಡದಿದ್ದರೆ, ಆ ಮೇಲೆ ಅದು ನಮಗೆ ಸಿಗುವುದೆಂಬ ಆಶೆಯಿಲ್ಲ. ಆ ಧನವನ್ನೆಲ್ಲ ಪಿಂಗಳನೊಬ್ಬನೇ ವಶಪಡಿಸಿಕೊಂಡು ನಿನ್ನನ್ನು ಕೇಳುವವರಿಲ್ಲದ ಸ್ಥಿತಿಗೆ ದೂಡಿದರೆ ನಮ್ಮ ಗತಿ ಏನಾಗಬೇಕು? ಅದಕ್ಕೇ ಈಗಲೇ ಕೊಟ್ಟರೆ ಪಿಂಗಳನು ನಿನ್ನ ಕೈಬಿಟ್ಟರೆ, ನಾವು ನಿನ್ನನ್ನು ಕಾಪಾಡೇವು." ಎಂದರು ಹಿರಿಯ ಮಗಂದಿರು.

ಅಣ್ಣಂದಿರು ಈ ವಿಧವಾಗಿ ಮಾತಾಡುವುದನ್ನು ಕೇಳುತ್ತಿದ್ದ ಪಿಂಗಳನಿಗೆ ಸಹಿಸಲಾಗಲಿಲ್ಲ. ತನಗೆ

ದೊಡ್ಡ ಅವಮಾನವಾದಂತೆ ತೋರಿತು. ಅವನು ತಾಯಿಯ ಹತ್ತಿರ ಬಂದು, "ಅಮ್ಮಾ, ನೀನು ಬೇಕಾದರೆ ಅಣ್ಣಂದಿರ ಹತ್ತಿರವೇ ಹೋಗು. ನಿನ್ನ ಆಸ್ತಿಯಲ್ಲಿ ಒಂದು ಚಿಕ್ಕಾಸು ಕೂಡಾ ನನಗೆ ಬೇಡ. ನನ್ನ ಪಾಲನ್ನು ಕೂಡಾ ಅವರಿಗೇ ಕೊಟ್ಟು ಬಿಡು. ನನ್ನ ಜೀವನ ನಾನೇ ನೋಡಿಕೊಂಡೇನು, ಆ ಚಿಂತೆ ಬಿಡು" ಎಂದನು.

ತಾಯಿ ಪಿಂಗಳನ ಮಾತನ್ನು ಒಪ್ಪಿಕೊಳ್ಳಲಿಲ್ಲ. ಆಗ ದೊಡ್ಡ ಮಗಂದಿರಿಗೆ ಇನ್ನಷ್ಟು ಕೋಪವೇರಿತು. ಕೋಲು ತೆಗೆದುಕೊಂಡು ತಮ್ಮೊಂದಿಗೆ ಹೊರಡು ವಿಯೋ ಇಲ್ಲವೋ ಎನ್ನುತ್ತ ತಾಯಿಯನ್ನು ಬಡಿಯ ತೊಡಗಿದರು. ಚಿಕ್ಕವನಾದ ಪಿಂಗಳನು ಅವರಿಗೆ ಅಡ್ಡ ಬಂದು ತಡೆಯಲು, ಅವರು ಮತ್ತಷ್ಟು ರೊಚ್ಚಿಗೆದ್ದು ಅವನನ್ನೂ ಚಚ್ಚಿ ಹಾಕಿದರು.

ತಾಯಿ ಹೇಗೋ ಉಪಾಯವಾಗಿ ಮನೆಯಿಂದ ಹೊರಬಿದ್ದು ನೆರೆಹೊರೆಯವರನ್ನು ಕರೆದುಕೊಂಡು ಬಂದಳು. ಅವರೆಲ್ಲ ಬಂದು ದೊಡ್ಡಣ್ಣಂದಿರನ್ನು ಬಿಡಿಸಿ, ಬೈದು ಬುದ್ಧಿ ಹೇಳಿದರು. ಅದರಿಂದ ಜೀವದತ್ತ, ಲಕ್ಷದತ್ತರು ಮನೆಯಿಂದ ಹೊರಡುತ್ತ, "ನಾವು ಪ್ರಪಂಚ ಜ್ಞಾನವಿಲ್ಲದ ಮೂರ್ಖರಲ್ಲ. ನಿಮ್ಮಿಬ್ಬರನ್ನೂ ನ್ಯಾಯಸ್ಥಾನಕ್ಕೆ ಎಳೆಯುತ್ತೇವೆ. ನಮ್ಮ ಭಾಗ ಎಲ್ಲಿಗೆ ಹೋಗುತ್ತೋ ನೋಡುತ್ತೇವೆ" ಎಂದು ಕೂಗಾಡಿದರು.

ಅವರು ಹೇಳಿದ ಹಾಗೆ ಮಾಡಿಯೇಬಿಟ್ಟರು. ಒಂದು ವಾರದೊಳಗೆ ಜೀವದತ್ತ, ಲಕ್ಷದತ್ತರು ತಾಯಿಯ ಮೇಲೆಯೂ, ತಮ್ಮನ ಮೇಲೆಯೂ ನ್ಯಾಯಸ್ಥಾನದಲ್ಲಿ ವ್ಯಾಜ್ಯ ಹೂಡಿಬಿಟ್ಟರು. ಪಿಂಗಳನೂ, ಅವನ ತಾಯಿಯೂ ನ್ಯಾಯಸ್ಥಾನಕ್ಕೆ ಬರಬೇಕೆಂದು ಆಜ್ಞೆ ಬಂದಿತು. ಅದಕ್ಕೆ ವಿಧೇಯರಾಗಿ ಅವರಿಬ್ಬರೂ ನ್ಯಾಯಸ್ಥಾನಕ್ಕೆ ಹೋಗಿ ಹಾಜ ರಾದರು. ದೊಡ್ಡವರಿಬ್ಬರೂ ನ್ಯಾಯಾಧಿಪತಿಗೆ ಲಂಚ




ಕೊಟ್ಟು ಸರಿಮಾಡಿಟ್ಟುದರಿಂದ, ಅವನು ತಾಯಿಗೂ ಪಿಂಗಳನಿಗೂ ವ್ಯತಿರೇಕವಾಗಿಯೇ ತೀರ್ಪು ಹೇಳಿದನು.

ತನಗೂ ತನ್ನ ತಾಯಿಗೂ ಬಹಳ ಅನ್ಯಾಯ ವಾಯಿತೆಂದು ಪಿಂಗಳನು ನ್ಯಾಯಸ್ಥಾನದಲ್ಲಿ ಮೊರೆ ಯಿಟ್ಟು ಅರ್ಜಿ ಹಾಕಿದನು. ಆಮೇಲೆ ಒಂದು ತಿಂಗಳ ವರೆಗೆ ಅರ್ಜಿಯ ಮೇಲೆ ಅರ್ಜಿ ತೆಗೆದುಕೊಂಡು ನ್ಯಾಯಸ್ಥಾನಕ್ಕೆ ಓಡಾಡಿದ ಮೇಲೆ, ಕಡೆಗೆ ನ್ಯಾಯಾಧಿಪತಿ ಪಿಂಗಳನಿಗೂ ಅವನ ತಾಯಿಗೂ ಅನುಕೂಲವಾಗಿಯೇ ತೀರ್ಪು ಹೇಳಿದನು.

ಹೀಗೆ ತೀರ್ಪು ತಮಗೆ ಅನುಕೂಲವಾಗಿ ಬಂದರೂ ಪಿಂಗಳನಿಗೂ ತಾಯಿಗೂ ಪ್ರಯೋಜನವೇನೂ ಆಗಲಿಲ್ಲ. ಮಧ್ಯವರ್ತಿಗಳಾಗಿ ಬಂದು ವ್ಯರ್ಥವಾಗಿ ರಾಜಿಯ ರಾಯಭಾರ ಮಾಡಿದವರಿಗೂ, ನ್ಯಾಯ ವಾದಿಗಳಿಗೂ ಖರ್ಚುಮಾಡಬೇಕಾಗಿ ಬಂದುದರಿಂದ, ಪಿಂಗಳನೂ, ಅವನ ತಾಯಿಯೂ ಇರುವ ಆಸ್ತಿ ಪೂರಾ ಕಳೆದುಕೊಳ್ಳಬೇಕಾಯಿತು. ಅತ್ತ ಜೀವದತ್ತ,

ಲಕ್ಷದತ್ತರೂ ಸಹ ಶತ ದರಿದ್ರರಾದರು. ಅವರಿಬ್ಬರೂ ಹೊಟ್ಟೆಗೆ ದಾರಿ ಕಾಣದೆ ಬೀದಿಯಲ್ಲಿ ಬಿಕಾರಿಗಳಾಗಿ ಜತೆ ಮಾತ್ರ ಬಿಡದೆ ತಿರುಗುತ್ತಲಿದ್ದರು.

ಪಿಂಗಳನು ತಮ್ಮ ಮೇಲೆ ಮುಗುಚಿಕೊಂಡ ದುರದೃಷ್ಟಕ್ಕೆ ಚಿಂತಿಸಿ ಎದೆಗೆಟ್ಟು ಹೋಗಲಿಲ್ಲ. ಅವನು ತಾಯಿಗೆ ಧೈರ್ಯ ಹೇಳಿ, ಒಂದು ಬಲೆಯನ್ನು ತೆಗೆದುಕೊಂಡು ಮೀನು ಹಿಡಿದು ತರುವೆನೆಂದು ನದಿಯ ಕಡೆಗೆ ಹೋದನು. ಮೀನು ಹಿಡಿಯುವ ವೃತ್ತಿಗೆ ಅವನು ಹೊಸಬನಾದರೂ, ಸಾಯಂಕಾಲದವರೆಗೂ ಬಲೆ ಬೀಸುತ್ತಾ, ಸಾಧ್ಯವಾದಷ್ಟು ಮೀನುಗಳನ್ನು ಹಿಡಿದನು. ಅವುಗಳನ್ನು ಅಂಗಡಿ ಬೀದಿಯಲ್ಲಿ ಮಾರಿ, ಬಂದ ಹಣದಿಂದ, ಜೀನಸಿನಂಗಡಿಯಿಂದ ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡನು. ಈ ಕೆಲಸ ಅವನಿಗೆ ನಂಬುಗೆಯನ್ನೂ, ಉತ್ಸಾಹವನ್ನೂ ಕೊಟ್ಟಿತು.

ಈ ವಿಧವಾಗಿ ಪಿಂಗಳನು ಹಗಲೆಲ್ಲಾ ಮೀನು ಹಿಡಿಯುವ ಕೆಲಸಮಾಡಿ, ಅದನ್ನು ಮಾರಿ ಬರುವ ಹಣದಿಂದ ಸುಖವಾಗಿ ಕಾಲವನ್ನು ಕಳೆಯುತ್ತಿದ್ದನು. ಕೆಲವು ದಿನಗಳಲ್ಲಿ ಅವನ ಅಣ್ಣಂದಿರಿಗೆ ಪಿಂಗಳನು ತಾಯಿಯೊಂದಿಗೆ ನಿಶ್ಚಿಂತನಾಗಿ ದಿನ ಕಳೆಯುತ್ತಿದ್ದಾನೆಂದು ಗೊತ್ತಾಯಿತು. ಅವನೂ ತಮ್ಮ ಹಾಗೆ ಬಿಕಾರಿಯಾಗಿರುತ್ತಿದ್ದರೆ ಸಂತೋಷವಾಗುತ್ತಿತ್ತು ಅವರಿಗೆ.

ಅವರು ಪಿಂಗಳನು ನದಿಗೆ ಹೋಗಿದ್ದ ಸಮಯದಲ್ಲಿ ತಾಯಿಯ ಬಳಿಗೆ ಬಂದು ಕಣ್ಣೀರು ಸುರಿದು ಗೋಳಾಡಿ, ಹಸಿವಿನಿಂದ ಒಣಗಿ ಹೋಗುತ್ತಿದ್ದೇವೆಂದು ಮೊರೆಯಿಟ್ಟುಕೊಂಡರು. ಮೊದಲು ಅವರು ತಾಯಿಗೆ ಎಷ್ಟೇ ಅನ್ಯಾಯ ಮಾಡಿದ್ದರೂ, ಹೆತ್ತ ಕರುಳಿನ ಪ್ರೇಮವು ಅದನ್ನೆಲ್ಲಾ ಮರೆಯಿಸಿಬಿಟ್ಟಿತು. ತಾಯಿ ಅವರಿಬ್ಬರಿಗೂ ಒಳ್ಳೆಯ ಊಟವನ್ನು ಬಡಿಸಿದಳು.

ಜೀವದತ್ತನೂ, ಲಕ್ಷದತ್ತನೂ ತಾಯಿಗೆ ಕೃತಜ್ಞತೆ ಹೇಳಿ, ಈ ಮೊದಲು ತಾವು ಮಾಡಿದ ಅನ್ಯಾಯಗಳಿಗೆ ಪಶ್ಚಾತ್ತಾಪವನ್ನು ತೋರಿಸಿದರು. ತಾಯಿ



ಕೂಡಾ ಅವರ ಮೇಲೆ ಮನಸ್ಸು ಕರಗಿ, ತಮ್ಮನು ಇಲ್ಲದ ಹೊತ್ತಿನಲ್ಲಿ ದಿನಾ ಬಂದು ಊಟಮಾಡಿಕೊಂಡು ಹೋಗುವಂತೆ ಅವರಿಗೆ ಹೇಳಿದಳು. ಕೆಲಸ ಮಾಡಲು ಸೊಂಟ ಬಗ್ಗಿಸಲಾಗದ ಶುಂಠ ಸೋಮಾರಿಗಳಾಗಿ ಬೆಳೆದ ಆ ಮಗಂದಿರು ತಾಯಿಯ ಮಾತು ಕೇಳಿ, ಆನಂದದಿಂದ ನಲಿದುಕೊಂಡು ಬೀದಿಗಿಳಿದು ಹೋದರು.

ಪಿಂಗಳನಿಗೆ ಇದಾವುದೂ ತಿಳಿಯಲಿಲ್ಲ. ಅವನು ದಿನಾ ಬೆಳಂಬಾಮದಲ್ಲಿಯೇ ಎದ್ದು ಬಲೆ ಎತ್ತಿಕೊಂಡು ನದಿಗೆ ಹೋಗಿಬಿಡುವನು. ಒಂದು ದಿನ ಏನಾಯಿತೋ ಏನೋ, ಅವನು ನದಿಯಲ್ಲಿ ಬಲೆ ಬೀಸಿ ಎಷ್ಟು ಹೊತ್ತು ಕಾದರೂ ಒಂದು ಮೀನು ಕೂಡಾ ಬೀಳದೆ ಹೋಯಿತು. "ಇದೆಂಥ ದುರದೃಷ್ಟ ಈ ದಿನ!" ಎಂದುಕೊಳ್ಳುತ್ತ ಸೂರ್ಯ ಮುಳುಗುವವರೆಗೂ ಸಹನೆಯಿಂದ ಕುಳಿತನು. ಕಡೆಗೆ ಖಾಲಿ ಬಲೆಯನ್ನು ತನ್ನ ಹೆಗಲಿಗೆ ಹಾಕಿಕೊಂಡು, ಬಲು ಬೇಸರದಿಂದ ಮನೆಯ ದಾರಿ ಹಿಡಿದನು.

ದಾರಿಯಲ್ಲಿ ದಿನಾ ಅವನು ಸಾಮಾನು ತೆಗೆದುಕೊಳ್ಳುವ ಅಂಗಡಿಯವನು, ಆ ದಿನ ಪಿಂಗಳನು ತನ್ನ ಅಂಗಡಿಗೆ ಬಾರದೆ ಸುಮ್ಮನೆ ಹೋಗುವುದನ್ನು ನೋಡಿ, ಅವನನ್ನು ಕೂಗಿ ಕರೆದನು.

ಪಿಂಗಳನು ಅಂಗಡಿಯ ಬಳಿಗೆ ಹೋಗಿ, ಆ ದಿನ ತನಗೆ ನದಿಯಲ್ಲಿ ಒಂದು ಮೀನು ಕೂಡಾ ಸಿಕ್ಕಲಿಲ್ಲವಾದುದರಿಂದ, ತನ್ನ ಹತ್ತಿರ ಹಣವೇನೂ ಇಲ್ಲವೆಂದು ಹೇಳಿದನು. ಆ ಮಾತು ಕೇಳಿ ಅಂಗಡಿಯವನು ನಕ್ಕು, "ನಿನಗೆ ಬೇಕಾದ ಜೀನಸುಗಳನ್ನು ದಿನಾ ಇಲ್ಲಿಂದ ಕೊಂಡುಕೊಂಡು ಹೋಗುವವನಲ್ಲವೇ ನೀನು? ಹಾಗಿರುವಾಗ, ಈ ದಿನ ಹಣವಿಲ್ಲದೆ ಹೋದಮಾತ್ರಕ್ಕೆ ಏನು ಮುಳುಗಿ ಹೋಯಿತು? ನಿನ್ನ ಮನೆಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಂಡು ಹೋಗು. ನಾಳೆ ಹಣ ಕೊಡುವಿಯಂತೆ" ಎಂದನು.

ಪಿಂಗಳನು ಅಂಗಡಿಯವನ ದಯೆಗೆ ಕೃತಜ್ಞತೆ ಹೇಳಿ, ಬೇಕಾದ ಸಂಬಾರ ಜೀನಸುಗಳನ್ನು ತೆಗೆದು



ಕೊಂಡು ಉತ್ಸಾಹದಿಂದ ಹೊರಟನು. ಸಾಧಾರಣವಾಗಿ ಅವನು ಮನೆಗೆ ಹಿಂದಿರುಗುವಾಗ ರಾತ್ರಿ ಬಹಳ ಹೊತ್ತಾಗುತ್ತಿತ್ತು. ಈ ದಿನ ಬಹಳ ಬೇಗನೇ ಮನೆಯನ್ನು ತಲುಪಿದನು.

ಆ ಸಮಯದಲ್ಲಿ ಪಿಂಗಳನ ಅಣ್ಣಂದಿರಿಬ್ಬರೂ ಮನೆಯಲ್ಲಿ ಆನಂದದಿಂದ ಊಟ ಮಾಡುತ್ತ ತಾಯಿಯೊಂದಿಗೆ ಮಾತುಕತೆಯಾಡಿಕೊಂಡಿದ್ದರು. ಥಕ್ಕನೆ ಪಿಂಗಳನು ಮನೆಯೊಳಗೆ ಹೊಕ್ಕ ಕೂಡಲೇ ಅವರಿಬ್ಬರೂ ಸುಮ್ಮನೆ ಬಾಯಿ ಮುಚ್ಚಿ ಗಲಿಬಿಲಿಗೊಂಡು ಎದ್ದು ಲಜ್ಜೆಯಿಂದ ತಲೆ ತಗ್ಗಿಸಿ, ಬೇಗಬೇಗನೆ ಹೊರಟು ಹೋಗಲು ನೋಡಿದರು.

ಆದರೆ ಪಿಂಗಳನು ಅಣ್ಣಂದಿರಿಬ್ಬರನ್ನೂ ಹೋಗಬೇಡಿರೆಂದು ತಡೆದು, ಆಲಿಂಗಿಸಿಕೊಂಡು "ಅಣ್ಣಂದಿರಾ! ಕೂಡಿ, ಕೂಡಿ. ಇರುವುದನ್ನು ಪೂರ್ತಿ ಊಟ ಮಾಡಿರಿ, ನಡೆದುದೆಲ್ಲಾ ಹೋಗಲಿ, ಮರೆತು ಬಿಡೋಣ. ನಾವೆಲ್ಲಾ ಒಂದೇ ತಂದೆಯ ಮಕ್ಕಳಲ್ಲವೆ?" ಎಂದು ಹೇಳಿದನು.

ತಮ್ಮನ ಬಾಯಿಯಿಂದ ಈ ಮಾತು ಹೊರಟ ಕೂಡಲೇ ಅಣ್ಣಂದಿರಿಗೆ ಬಹಳ ಸಂತೋಷವಾಯಿತು, ಅವರು ಪಿಂಗಳನನ್ನು ಮೆಚ್ಚಿಕೊಳ್ಳುತ್ತ "ತಮ್ಮಾ. ನೀನು ಇಷ್ಟು ಒಳ್ಳೆಯವನೆಂದು ನಮಗೆ ಗೊತ್ತಿಲ್ಲದೆ ಹೋಯಿತು. ಗೊತ್ತಿರುತ್ತಿದ್ದರೆ ಸುಮ್ಮಸುಮ್ಮನೆ ನಿಮ್ಮ ಮೇಲೆ ವ್ಯಾಜ್ಯ ಮಾಡಿ ನಮ್ಮ ಆಸ್ತಿಯೊಂದಿಗೆ ನಿಮ್ಮದನ್ನೂ ಹೋಗುವಂತೆ ಮಾಡುತ್ತಿರಲಿಲ್ಲ" ಎಂದು ತಮ್ಮ ಪಶ್ಚಾತ್ತಾಪವನ್ನು ತೋರಿಸಿದರು.

ಇಷ್ಟು ಕಾಲದ ಮೇಲೆ ಮಕ್ಕಳು ತಮ್ಮ ವಿರೋಧ ಭಾವವನ್ನು ಬಿಟ್ಟು ಒಂದುಗೂಡಿದುದುದನ್ನು ನೋಡಿ ತಾಯಿಗೂ ಬಹಳ ಸಂತೋಷವಾಯಿತು.

ಪಿಂಗಳನು ಮರುದಿನದಲ್ಲಿ ಕೂಡಾ ಎಂದಿನಂತೆ ಬೆಳಗು ಮುಂಜಾವದಲ್ಲೇ ಎದ್ದು ಬಲೆ ತೆಗೆದುಕೊಂಡು ನದಿಗೆ ಹೋದನು. ಆ ದಿನ ಕೂಡಾ ಸಾಯಂಕಾಲದವರೆಗೂ ಅವನಿಗೆ ಮೀನೇ ಸಿಗಲಿಲ್ಲ. ನದಿಯ ಮೀನುಗಳೆಲ್ಲ ಹೇಗೆ ಮಾಯವಾದುವೆಂದು ಆಶ್ಚರ್ಯ



ಪಟ್ಟನು. ಕತ್ತಲಾಗುವಾಗ ತನ್ನ ದುರದೃಷ್ಟವನ್ನು ನಿಂದಿಸಿಕೊಳ್ಳುತ್ತ, ಬರಿಗೈಯಿಂದ ಮನೆಗೆ ಹೋಗುವಾಗ, ಅಂಗಡಿಯವನು ಮತ್ತೆ ಕರೆದು ನಡೆದ ಸಂಗತಿಯನ್ನು ತಿಳಿದು, ಆ ದಿನ ಕೂಡಾ ಸಾಲವಾಗಿ ಬೇಕಾದ ಸಾಮಾನುಗಳನ್ನು ಕೊಟ್ಟನು.

ಈ ವಿಧವಾಗಿ ಒಂದರ ಮೇಲೊಂದು ಹತ್ತು ದಿನಗಳ ವರೆಗೂ ಪಿಂಗಳನಿಗೆ ನದಿಯಲ್ಲಿ ಮೀನು ಸಿಗದೆ ಹೋಯಿತು. ಹನ್ನೊಂದನೇ ದಿನ ಅವನು ಅಲ್ಲಿಗೆ ಹೋಗದೆ, ಒಂದು ಯೋಜನ ದೂರದಲ್ಲಿದ್ದ ಶುಕ ಸರೋವರಕ್ಕೆ ಹೋದನು.

ಆ ಶುಕ ಸರೋವರದಲ್ಲಿ ಅವನು ಬಲೆ ಬೀಸಿ, ತೀರದಲ್ಲಿ ಕುಳಿತುಕೊಂಡ ಸ್ವಲ್ಪ ಹೊತ್ತಿಗೆಲ್ಲಾ, ಮೈದಾನದ ಮೇಲೆ ಒಬ್ಬ ಕುದುರೆಯ ಸವಾರನು ಬರುವ ಹಾಗೆ ಧೂಳೆದ್ದಿತು. ಪಿಂಗಳನು ಅಲ್ಲಿಗೆ ಬರುವವನು ಯಾರಾಗಿರಬಹುದೆಂದು ಯೋಚಿಸುತ್ತ ನೋಡುತ್ತಿರಲು, ರಾಹುತನು ಕುದುರೆಯನ್ನು ಹಾರಿಸಿಕೊಂಡು ಪಿಂಗಳನ ಸಮೀಪ ಬಂದು "ಪಿಂಗಳಾ ! ನೀನು ನನಗೊಂದು ಸಹಾಯ ಮಾಡಬೇಕು !" ಎನ್ನುತ್ತಾ ಕುದುರೆಯಿಂದ ಇಳಿದನು.

ತಾನು ಎಂದೂ ನೋಡಿ ಅರಿಯದ, ಈ ಅಪರಿಚಿತನು ನೆಟ್ಟಗೆ ತನ್ನ ಬಳಿಗೆ ಬಂದು, ಹೆಸರೆತ್ತಿ ಕರೆದುದನ್ನು ಕೇಳಿ ಪಿಂಗಳನಿಗೆ ಬಹಳ ಆಶ್ಚರ್ಯವಾಯಿತು. ಅವನು ಹೊಸಬನ ಮುಖವನ್ನು ಅನುಮಾನದಿಂದ ನೋಡುತ್ತ "ನನ್ನ ಹೆಸರು ನಿಮಗೆ ಹೇಗೆ ಗೊತ್ತು ? ನಿಮಗೆ ನನ್ನಿಂದಾಗಬೇಕಾದ ಸಹಾಯವೆಂತಹುದು ? " ಎಂದು ಕೇಳಿದನು.

ಆ ಪ್ರಶ್ನೆಗೆ ಹೊಸಬನು ನಗುತ್ತ, "ನಿನ್ನ ಹೆಸರು, ನೀನು ಯಾವ ಸಮಯದಲ್ಲಿ ಈ ಶುಕ ಸರೋವರಕ್ಕೆ ಮೀನು ಹಿಡಿಯಲು ಬರುವಿ ಎಂಬುದನ್ನೆಲ್ಲಾ ನಮ್ಮ ಗುರುಗಳು ನೀನು ಹುಟ್ಟುವ ಮೊದಲೇ ನನಗೆ ಹೇಳಿದ್ದಾರೆ. ಅದು ನಲುವತ್ತು ವರ್ಷಗಳ ಹಿಂದಿನ ಮಾತು. ಅದೆಲ್ಲ ಈಗ ಬೇಡ. ನಾನು ಕೇಳಿದ ಸಹಾಯ ಮಾಡುವಿಯಾ ? " ಎಂದು ಕೇಳಿದನು. "ಅದೇನು ಸಹಾಯವೆಂದು ಹೇಳಿದರೆ ತಾನೇ ತಿಳಿಯುತ್ತದೆ ?



ನಿಮ್ಮ ಹೆಸರು ಕೂಡ ಇನ್ನೂ ನೀವು ಹೇಳಿಲ್ಲವಷ್ಟೆ?" ಎಂದನು ಪಿಂಗಳ ವಿನಯದಿಂದ

"ನನ್ನ ಹೆಸರು ಮಂಡನ. ನೀನು ನನಗೆ ಮಾಡಬೇಕಾದ ಸಹಾಯ ಅಷ್ಟೇನೂ ಕಷ್ಟವಾದುದಲ್ಲ. ನನ್ನ ಕೈಗಳೆರಡನ್ನೂ ಸೇರಿಸಿ ಹಗ್ಗದಿಂದ ಬೆನ್ನಿನ ಕಡೆಗೆ ಕಟ್ಟಿ ಹಾಕಿ, ಆಮೇಲೆ ನನ್ನನ್ನು ಎತ್ತಿ ಸರೋವರದಲ್ಲಿ ಹಾಕಿಬಿಡು. ಸ್ವಲ್ಪ ಹೊತ್ತಿನ ಮೇಲೆ ನನ್ನ ತಲೆ ನೀರಿನಿಂದ ಮೊದಲು ಮೇಲೆದ್ದರೆ, ಬಲೆ ಬೀಸಿ ನನ್ನನ್ನು ತೀರಕ್ಕೆ ಎಳೆಯಬೇಕು. ಅದಕ್ಕೆ ಬದಲು ಕಾಲುಗಳು ಮೊದಲು ಮೇಲೆ ಕಾಣಿಸಿದರೆ, ನೀನು ಈ ಕುದುರೆಯನ್ನು ಪಟ್ಟಣಕ್ಕೆ ತೆಗೆದುಕೊಂಡು ಹೋಗಿ ಕಾಂಚನಮಿಶ್ರನೆಂಬ ವರ್ತಕನಿಗೆ ಒಪ್ಪಿಸಿಬಿಡಬೇಕು. ಅವನು ನಿನಗೆ ನೂರು ಮೊಹರಿಗಳನ್ನು ಕೊಡುತ್ತಾನೆ" ಎಂದನು.

ಪಿಂಗಳನು ಮಂಡನನು ಹೇಳಿದ ಹಾಗೆ ಮಾಡಲು ಅಂಗೀಕರಿಸಿದನು. ಮಂಡನನು ಕುದುರೆಯ ಜೀನಿಗೆ ನೇತಾಡುತ್ತಿದ್ದ ಒಂದು ಉದ್ದವಾದ ಹಗ್ಗವನ್ನು ತಂದು ಪಿಂಗಳನ ಕೈಗೆ ಕೊಟ್ಟು "ತೆಗೆದುಕೋ. ಕೆಲಸವನ್ನು ಪ್ರಾರಂಭಿಸು" ಎಂದನು.

ಪಿಂಗಳನು ಮಂಡನನ ಕೈಗಳೆರಡನ್ನೂ ಬೆನ್ನಿನ ಕಡೆಗೆ ತಿರುಗಿಸಿ ಕಟ್ಟಿ, ಅವನನ್ನು ಎತ್ತಿ ಹೆಗಲ ಮೇಲೆ ಹೊತ್ತು, ಸರೋವರದ ತೀರದಲ್ಲಿ ನಿಂತು, ಮುಂದೆ ಹಿಂದೆ ಮೂರುಬಾರಿ ಊಗಾಡಿ ಅವನನ್ನು ಸರೋವರದೊಳಗೆ ಬೀಸಿ ಹಾಕಿದನು.

ಎರಡು ನಿಮಿಷಗಳ ವರೆಗೆ ಸರೋವರದ ನೀರಿನಲ್ಲಿ ಅಲೆಗಳೆದ್ದು, ನಿಂತು ಹೋದ ಮೇಲೆ ಪಿಂಗಳನು ನೋಡುತ್ತಿದ್ದ ಹಾಗೆ ಮಂಡನನ ಕಾಲುಗಳು ಮೇಲೆ ಎದ್ದುವು. ಅದನ್ನು ನೋಡಿ ಪಿಂಗಳನು "ಅಯ್ಯೋ ಪಾಪ ! ಸತ್ತು ಹೋದನೆಂದು ಕಾಣುತ್ತದೆ !" ಎಂದುಕೊಂಡು ಕುದುರೆಯ ಕಡೆಗೆ ನಡೆದನು.

ಅವನು ಮಂಡನನ ಕುದುರೆಯನ್ನು ನಡೆಸಿಕೊಂಡು ಪಟ್ಟಣಕ್ಕೆ ಹೋದನು. ಅಲ್ಲಿ ಬಹು ದೊಡ್ಡ ವರ್ತಕನಾಗಿದ್ದ ಕಾಂಚನಮಿಶ್ರನ ಅಂಗಡಿಯನ್ನು ಕಂಡುಹಿಡಿಯಲು ಏನೂ ಕಷ್ಟವಾಗಲಿಲ್ಲ. ಕಾಂಚನಮಿಶ್ರನು ಪಿಂಗಳನನ್ನೂ ಅವನೊಂದಿಗಿದ್ದ ಕುದುರೆಯನ್ನೂ ನೋಡಿದ ಕೂಡಲೇ "ದುರಾಶೆಯೇ ದುಃಖಕ್ಕೆ ಮೂಲ !" ಎಂದು ಗೊಣಗಿಕೊಂಡು, ಪೆಟ್ಟಿಗೆಯೊಳಗಿನಿಂದ ಹಣದ ಚೀಲವನ್ನು ಎತ್ತಿಕೊಂಡನು. ಅದರೊಳಗಿನಿಂದ ನೂರು ಮೊಹರಿಗಳನ್ನು ಎಣಿಸಿ ತೆಗೆದು ಪಿಂಗಳನಿಗೆ ಕೊಡುತ್ತ, "ತಮ್ಮಾ ! ತೆಗೆದುಕೋ. ಈ ಸಂಗತಿ ಮಾತ್ರ ರಹಸ್ಯವಾಗಿರಲಿ. ಇದು ಗುಟ್ಟಾಗಿದ್ದರೇನೇ ನಿನಗೆ ಕ್ಷೇಮ. ತಿಳಿಯಿತೇ ?" ಎಂದು ಎಚ್ಚರಿಸುವವನಂತೆ ಹೇಳಿದನು.

—(ಇನ್ನೂ ಇದೆ)

